ಮಾಪ್ತವ್ಯಂ'' ''ದೃಶ್ಯತೇ ತ್ವಗ್ರ್ಯಯಾ ಬುಧ್ಯಾ'' ಇತ್ಯಾದಿವಾಕ್ಯಾನಾಂ ಸಂಗತಿಃ ಇತಿ ಚೇದುಚ್ಯತೇ ''ತತ್ಪ್ರಾಣೇಷ್ವಂತರ್ಮನಸೋಲಿಂಗಂ'' ಇತಿ ಶ್ರುತಿಸಿದ್ಧ ಪ್ರಾಣಲಿಂಗವಿಷಯಕತ್ವಂ ತೇಷಾಂ ವಾಕ್ಯಾನಾಮಿತಿಬ್ರೂಮಃ ಶಿವಾದಿ ಧರಣ್ಯಂತ ಷಟ್‌ತ್ರಿಂಶತ್ತತ್ತ್ವೋರ್ಧ್ವಗತ ಪರಬ್ರಹ್ಮಣೋ ಲಿಂಗಸ್ಯ ಘೃತಕಾಠಿಣ್ಯ ನ್ಯಾಯೇನ ಪ್ರಾಣಲಿಂಗರೂಪತ್ವಾತ್ ತಸ್ಯಚಮನಸೋಗ್ರಾಹ್ಯತ್ವಾತ್| ಪ್ರಾಣ ಲಿಂಗಂ ಮನೋಗ್ರಾಹ್ಯಂ ಭವೇತ್ ಸಕಲನಿಷ್ಕಲಂ || ಇತ್ಯುಕ್ತತ್ವಾತ್ ನ ''ಮನಸೈವೇದಮಾಪ್ತವ್ಯಂ'' ಇತ್ಯಾದಿ ಶ್ರುತಿವಾಕ್ಯವ್ಯಾಕೋಪಃ ''ಯನ್ಮನಸಾ ನಮನುತೇ'' ಇತ್ಯಾದಿ ವಾಕ್ಯಾನಾಂತು ನಿರ್ಗುಣ ನಿಷ್ಕಲ ಭಾವಲಿಂಗ ವಿಷಯ

---

ನಾಶಕತನವನ್ನು ಹೇಳಿದ್ದೇವೆ. ತಿಳಿಯಿತೆ? ಒಳ್ಳೇದು ಬ್ರಹ್ಮಾದ್ವೈತಿಯೆ ನೋಡು ! ಕೇವಲ ವೃತ್ತಿಯಲ್ಲಿಯೂ ಕೇವಲ ಚೈತ್ಯನ್ಯದಲ್ಲಿಯೂ ಇಲ್ಲದ ನಾಶಕತನವು ವೃತ್ತಿಯಿಂದ ಕೂಡಿದ ಚೈತನ್ಯದಲ್ಲಿ ಬರಬಹುದೆ? ಇದು ನಿನ್ನ ಅನುಭವಕ್ಕಾದರೂ ಬರುತ್ತದೇನು. ಒಂದೊಂದರಲ್ಲಿಲ್ಲದ ಧರ್ಮವು ಒಂದರಿಂದ ಕೂಡಿದ ಮತ್ತೊಂದರಲ್ಲಿ ಬರುತ್ತದೆನ್ನುವ ಮಾತು ಅನುಭವವಿರುದ್ಧವಲ್ಲವೆ? ಕುಂಡಲದಲ್ಲಿಯೂ ದೇವದತ್ತನಲ್ಲಿಯೂ ಇಲ್ಲದ ಪಶುತನವು ಕುಂಡಲ ವಿಶಿಷ್ಟನಾದ ದೇವದತ್ತನಲ್ಲಿ ಬರುತ್ತದೆಂದು ಹೇಳಬಹುದೆ? ಮತ್ತು ವೃತ್ಯವಚ್ಛಿನ್ನ ಚೈತನ್ಯವು ವೃತ್ತಿಗೆ ಅಧೀನವಾಗಲಿಲ್ಲವೆ? ಲೋಹಪಿಂಡದಲ್ಲಿ ಪೂರ್ಣವಾಗಿ ಜಡಿದ ಸೂಜಿಯು ಲೋಹಪಿಂಡಾಧೀನವಲ್ಲವೆ? ಆ ಸೂಜಿಯು ಮತ್ತೊಂದನ್ನು ನಾಶಮಾಡಲಾರದು ಅದರಂತೆ ವೃತ್ಯವಚ್ಛಿನ್ನವಾದ ಚೈತನ್ಯವೂ ಕೂಡಾ ಅವಿದ್ಯೆಯನ್ನು ನಾಶಮಾಡಲಾರದು ಆದ್ದರಿಂದ ಆ ಜಡವಾದ ವೃತ್ತಿಯು ಫಲವುಳ್ಳದ್ದಾಗಲಿಲ್ಲ. ಆದಕಾರಣ ವೃತ್ತಿಗೆ ಫಲವ್ಯಾಪ್ತಿಯು ಇಲ್ಲದಿರುವದರಿಂದ ಮನಸ್ಸು ಬ್ರಹ್ಮದಲ್ಲಿ ಪ್ರವೇಶಿಸುವದಿಲ್ಲವೆಂದು ಹೇಳುವ ವಾಕ್ಯಕ್ಕೆ ವಿರೋಧವಿಲ್ಲವೆಂದೂ ಬ್ರಹ್ಮಕ್ಕೆ ವೃತ್ತಿವ್ಯಾಪ್ತಿಯನ್ನು ಸ್ವೀಕರಿಸುವದರಿಂದ ಮನಸ್ಸು ಬ್ರಹ್ಮದಲ್ಲಿ ಪ್ರವೇಶಿಸುತ್ತದೆ, ಎಂಬುವ ವಾಕ್ಯಗಳಿಗೆ ವಿರೋಧವಿಲ್ಲವೆಂದೂ, ಶ್ರುತಿವಾಕ್ಯಗಳ ವಿರೋಧವನ್ನು ಪರಿಹರಿಸುವದು ಯುಕ್ತವಲ್ಲೆಂದು ಶಾಂಕರೀಕಾರನು ಸಂಕ್ಷೇಪದಿಂದ ನಿರಸನ ಮಾಡಿರುವನು ಎಲೈ ಶಿವಾದ್ವೈತಿಯೆ ನಿನ್ನ ಮತದಲ್ಲಿ ಮನಸ್ಸು ಬ್ರಹ್ಮದಲ್ಲಿ ಪ್ರವೇಶಮಾಡುವದಿಲ್ಲವೆಂಬರ್ಥವುಳ್ಳ "ನೋಮನೋ'' ಅವಾಂಗ್ಮಾನಸಗೋಚರಃ'' ಎಂಬುವ ಮೊದಲಾದ ವಾಕ್ಯಗಳಿಗೂ ''ಹೃದಾ ಹೃದಿಸ್ಥಂ,, ಮನಸೈವೇದಮಾಪ್ತವ್ಯಂ'' ಎಂಬುವ ಮೊದಲಾದ ಮನಸ್ಸು ಬ್ರಹ್ಮದಲ್ಲಿ ಪ್ರವೇಶಿಸುತ್ತದೆಂಬರ್ಥವುಳ್ಳ ವಾಕ್ಯಗಳಿಗೂ, ವಿರೋಧವನ್ನು ಹೇಗೆ ಪರಿಹರಿಸುವಿ ಅಂದರೆ ಎಲೈ ಬ್ರಹ್ಮಾದ್ವೈತಿಯೆ ನಮ್ಮ ವೀರಶೈವ ಮತದಲ್ಲಿ 'ನಮ್ಮ ಪೂರ್ವಾಚಾರ್ಯರು ಆ ವಿರುದ್ಧವಾಕ್ಯಗಳಿಗೆ ಬಹುಸರಳ ರೀತಿಯಿಂದ ವಿರೋಧವನ್ನು ಪರಿಹರಿಸಿರುವರು, ಹೇಗಂದರೆ "ತತ್ಪ್ರಾಣೇಷ್ವಂತರ್ಮನಸೊಲಿಂಗಂ,, ಅಂದರೆ ಪ್ರಾಣಪ್ರಧಾನವಾದ ಸೂಕ್ಷ್ಮ ಶರೀರದಲ್ಲಿರುವ ಆ ಲಿಂಗವು, ಮನಸ್ಸಿನಿಂದ ಗ್ರಹಿಸಲು ಯೋಗ್ಯ

ಕತ್ವೇನ ಸಾಮಂಜಸ್ಯಾಚ್ಚ ನ ವಿರೋಧಃ ತಸ್ಯ ಭಾವೈಕಗ್ರಾಹ್ಯತ್ವಾತ್. ‚‚ಭಾ
ವಗ್ರಾಹ್ಯಮನೀಡಾಖ್ಯಂ ಭಾವಾಭಾವಕರಂಶಿವಂ ಕಲಾಸರ್ಗಕರಂದೇವಂ ಯೇ
ವಿದುಸ್ತೆ ಜಹುಸ್ತನುಂ‚‚ ಇತಿಶ್ರುತೇಃ‚‚ ನಿಷ್ಕಲಂ ಭಾವಲಿಂಗಂ ಸ್ಯಾದ್ಭಾವಗ್ರಾ
ಹ್ಯಂ ಪರಾತ್ಪರಂ ಸನ್ಮಾತ್ರಂಭಾವ ಲಿಂಗಂಸ್ಯಾದಿತಿನಿಷ್ಠಾ ಮಹಾತ್ಮನಾಂ ||
ಇತ್ಯನುಭವಸೂತ್ರಾಚ್ಚ ನಚ ತಸ್ಯಗ್ರಾಹ್ಯತ್ವೇ ಪರಿಚ್ಛಿನ್ನತ್ವಂದುರ್ವಾರಮಿತಿವಾ
ಚ್ಯಂ | ಈದೃಗಿದಮಿತಿ ಪರಬ್ರಹ್ಮಣೋ ಲಿಂಗಸ್ಯ ಪರಿಚ್ಛೇದಾಸಂಭವೇಪಿ
‚‚ಅಸ್ತೀತ್ಯೇವೋಪಲಬ್ಧವ್ಯಃ‚‚ ‚‚ಭಾವಗ್ರಾಹ್ಯಂ‚‚ ಇತ್ಯಾದಿ ಶ್ರುತ್ಯಾ ಗ್ರಾ
ಹ್ಯತ್ವಸಂಭವಾತ್ ಭಾವೋನಾಮಸತ್ತಾ ತಯಾ ಗ್ರಾಹ್ಯತ್ವಾತ್ ಪರಶಿವಸ್ಯ ಭಾ
ವಲಿಂಗತ್ವವ್ಯಪದೇಶಃ ಅಸ್ತೀತ್ಯಾಕಥ್ಯತೇವಸ್ತು ತತ್ಸತ್ತಾ ಭಾವಉಚ್ಯತೆ ಇತ್ಯ
ನುಭವಸೂತ್ರೋಕ್ತೇಃ ಯದ್ವಾ ಭಾವೋ ನಾಮ ವಿಶುದ್ಧಚಿತ್ತಂ ಚಿತಿಶಕ್ತಿರೂಪಂ
ತೇನಗ್ರಾಹ್ಯತ್ವಾತ್ಪರಶಿವಸ್ಯ ಭಾವಲಿಂಗತ್ವೇನಾಭಿಧಾನಂ | ತಸ್ಮಾತ್ತಲ್ಲಿಂಗಂ
ಚಕ್ಷುರಾದಿಬಾಹ್ಯಕರಣೇನ ನವಿದ್ಮಃ ನವಾ ಅಂತಃಕರಣೇನ ವಿಜಾನೀಮಃ

---

ವಾಗುತ್ತದೆ ಎಂಬುವ. ಈ ಶೃತಿಯಿಂದ ಸಿದ್ಧವಾದದ್ದಾಗಿಯೂ, ಸಕಲ ನಿಷ್ಕಲಸ್ವರೂಪವಾಗಿ
ಯೂ ಇರುವ ಯಾವ ಪ್ರಾಣಲಿಂಗವಿದೆಯೊ? ಅದು ಮನಸ್ಸಿನಿಂದ ಗ್ರಹಿಸಲು ಯೋಗ್ಯವಾಗಿರುವ
ದರಿಂದ "ಹೃದಾ ಹೃದಿಸ್ಥಂ‚‚ ಮನಸೈವೇದ ಮಾಪ್ತವ್ಯಂ‚‚ ಎಂಬುವ ಮನಸ್ಸು ಬ್ರಹ್ಮವನ್ನು
ಹೊಂದುತ್ತದೆ ಎಂಬುವ ಮೊದಲಾದ ಶೃತಿಗಳಿಗೆ ವಿರೋಧವಿಲ್ಲ.

ಪರಶಿವಬ್ರಹ್ಮವು ತಾನು ಸರ್ವತ್ರವ್ಯಾಪಕವಾಗಿಯೂ, ವಿಶ್ವಾತ್ಮಕವಾಗಿಯೂ, ವಿಶ್ವಾ
ಧಿಪತಿಯಾಗಿಯೂ ಇದ್ದರೂ ಘೃತಕಾಠಿಣ್ಯ ನ್ಯಾಯದಿಂದ ಭಕ್ತರನ್ನು ಅನುಗ್ರಹಿಸುವದಕ್ಕಾಗಿ
ಸೂಕ್ಷ್ಮ ಶರೀರದಲ್ಲಿ ಪ್ರಾಣಲಿಂಗರೂಪವಾಗಿದೆ. ಈ ಪ್ರಾಣಲಿಂಗವು ಮನಸ್ಸಿನಿಂದ ಗ್ರಹಿಸಲು
ಯೋಗ್ಯವಾಗಿರುವದರಿಂದ ಮನಸ್ಸು ಬ್ರಹ್ಮವನ್ನು ಹೊಂದುತ್ತದೆಂದು ಹೇಳುವ ಶ್ರುತಿಗೆ ವಿರೋ
ಧವಿಲ್ಲ. ಮನಸ್ಸುಬ್ರಹ್ಮದಲ್ಲಿ ಪ್ರವೇಶಮಾಡುವದಿಲ್ಲವೆಂದು ಹೇಳುವ "ನೋಮನಃ, "ಯನ್ಮ
ನಾನಮನುತೆ‚‚ ಎಂಬ ಶ್ರುತಿಗಳು ಭಾವಲಿಂಗ ವಿಷಯಕಗಳು‚ ಆದ್ದರಿಂದ ಮನಸ್ಸಿಬ್ರಹ್ಮವನ್ನು
ಹೊಂದುವದಿಲ್ಲವೆಂದು ಹೇಳುವ ಶ್ರುತಿಗಳಿಗೆ ವಿರೋಧವಿಲ್ಲ. ಯಾಕಂದರೆ ಭಾವಲಿಂಗವು ಕೇವ
ಲಭಾವದಿಂದಲೇ ಗ್ರಹಿಸಲು ಯೋಗ್ಯವಾಗಿದೆ‚ ಭಾವಗ್ರಾಹ್ಯಂ‚‚ (ಭಾವದಿಂದ ಗ್ರಾಹ್ಯವು)
ಎಂದು ಶ್ರುತಿಯೂ‚‚ ಸದ್ರೂಪಂ ಭಾವಲಿಂಗಂ ಸ್ಯಾತ್, ಭಾವಗ್ರಾಹ್ಯಂ ಪರಾತ್ಪರಂ| ಎಂದು
ಅನುಭವ ಸೂತ್ರವೂ ಹೇಳುತ್ತದೆ. ಭಾವಲಿಂಗಕ್ಕೂ ಕೂಡಾ ಗ್ರಾಹ್ಯತ್ವವನ್ನು ಹೇಳಿದರೆ ಅದು
ಪರಿಚ್ಛಿನ್ನವಾಗಲಿಲ್ಲವೆ? ಅಂದರೆ ಇದು ಇಂಥಾದ್ದು ಎಂಬುವ ಪರಿಚ್ಛೇದ ವಿಲ್ಲದಿದ್ದರೂ ‚‚ಅ
ಸ್ತೀತ್ಯೇವೋ ಪಲಬ್ಧವ್ಯಃ‚‚ ಭಾವಗ್ರಾಹ್ಯಂ‚‚ ಎಂಬದಾಗಿ ಶ್ರುತಿಗಳಿರುವದರಿಂದ ಅದಕ್ಕೆ ಗ್ರಾ
ಹ್ಯತ್ವವನ್ನು ಹೇಳಬೇಕಾಗಿದೆ. ಇಲ್ಲದಿದ್ದರೆ ಆ ಶ್ರುತಿಗಳಿಗೆ ಅಪ್ರಮಾಣ್ಯವನ್ನು ಹೇಳಬೇ

ಶ್ರೋತ್ರಸ್ಯಶ್ರೋತ್ರ ಮಿತ್ಯಾದಿನಾ ಯದುಕ್ತಂ ಲಿಂಗಾಂಗಸಾಮರಸ್ಯರೂಪ ಉಪಾಯಃ ತಮಂತರೇಣ ನ ವಿಜಾನೀಮ ಇತ್ಯರ್ಥಃ ಯಥಾ ಯೇನ ಪ್ರಕಾರೇಣ ಶ್ರೋತ್ರಾದೇಃ ಶ್ರೋತ್ರಾದಿರೂಪಂ ಯಲ್ಲಿಂಗಂಜಾತಂ ಭಕ್ತಾನುಗ್ರಹಾರ್ಥಂ ತದೇತದಿದಂತಯಾ ಕಥಮನುಶಿಷ್ಯಾದುಪದಿಶೇತ್ ಕಿಂತುಪೂರ್ವಾಚಾರ್ಯೈರ್ಯಥೋಪದಿಷ್ಟಂ ತಥೈವ ವ್ಯಾಚಷ್ಟೆ ಶೃಣ್ವಿತ್ಯಾಹ ತದಿತಿ ಯದುಕ್ತಂ ಷಟ್‌ಸ್ಥಲರೂಪಂಬ್ರಹ್ಮ ತದಿತ್ಯರ್ಥಃ ವಿದಿತಾದ್ಭಾವತ್ವೇನ ಪ್ರತೀಯಮಾನಾತ್ ಕಾರಣಾತ್ಮಕಾತ್ | ಅನ್ಯತ್ಪೃಥಗಿತ್ಯರ್ಥಃ ಅಥೋಪಿ ಅವಿದಿತಾತ್ ಸದಾಸತ್ವೇನಾಪ್ರತೀಯಮಾನಾದಸತಃ ಕಾರ್ಯಜಾತಾತ್ | ಅಧಿ ಉಪರಿ ಅನ್ಯದಿತಿ ಯಾವತ್ | ನ ಕಾರಣರೂಪಮೇವ ಸನ್ನ ಕಾರ್ಯರೂಪಮೇವಾಸದಿತ್ಯರ್ಥಃ | "ಸತ್ಯಂಚಾನೃತಂಚ" ಇತಿ ಶ್ರುತೇಃ ಸದಸಚ್ಚಾಹಮರ್ಜುನೆ ತಿಸ್ಮೃತೇಶ್ಚ ನನ್ವಿದಮಸಂಗತಂ ಸತ್ವಾಸತ್ವಯೊ ವಿರೋಧಾತ್ | ಇತಿ ಚೇನ್ನ ಸತ್ವಾಸತ್ವವಿರೋಧವಿಷಯಕಜ್ಞಾನೇ ತಯೋಃ ಸಹಾವಸ್ಥಾನಮಿವ ಚಿಜ್ಜ್ಯೋತಿಷಿ ಲಿಂಗೆ ಸಹಾವಸ್ಥಾ

---

ನಾದೀತು? ಭಾವವೆಂದರೆ ಸತ್ತಾ ಈ ಸತ್ವದಿಂದ ಆ ಪರಶಿವ ಬ್ರಹ್ಮವು ಗ್ರಹಿಸಲು ಯೋಗ್ಯವಾಗಿರುವದರಿಂದ ಅದಕ್ಕೆ ಭಾವಲಿಂಗವೆಂದು ವೀರಶೈವ ಶಾಸ್ತ್ರದ ಸಂಜ್ಞೆಯು "ತತ್ಸತ್ತಾ ಭಾವ ಉಚ್ಯತೆ,, ಎಂದು ಅನುಭವ ಸೂತ್ರವು ಹೇಳುತ್ತದೆ. ಅಥವಾ ಭಾವವೆಂದರೆ ವಿಶುದ್ಧ ಚಿತ್ತವು. (ಚಿಚ್ಛಕ್ತಿಯು) ವಿಶ್ವಾತ್ಮಕ. ಶಿವೋಹಂ ಚಿನ್ಮಾತ್ರೋಹಂ,, ಹೀಗೆಂಬುವ ಅನುಭವಕ್ಕೆ ಕಾರಣವಾದ ವಿಮರ್ಶ ಶಕ್ತಿಯು ಜೀವಾವಸ್ಥೆಯಲ್ಲಿ ಚಿತ್ತರೂಪದಿಂದಿರುವ ಅಂತಃಕರಣವು ಯಾವಾಗ ಶಿವಯೋಗಾಭ್ಯಾಸದಿಂದ ಶಿವನ ಚಿಚ್ಛಕ್ತಿರೂಪವಾಗುತ್ತದೆಯೊ? ಆಗ ಅಂಥ ಚಿಚ್ಛಕ್ತಿರೂಪವಾದ ಭಾವದಿಂದ ಪರಶಿವಲಿಂಗವು ಗ್ರಹಿಸಲು ಯೋಗ್ಯವಾಗುತ್ತದೆ ಆದ್ದರಿಂದ ಆ ಪರಶಿವ ಲಿಂಗಕ್ಕೆ ಭಾವಲಿಂಗವೆಂದು ಶೈವಶಾಸ್ತ್ರವು ಹೇಳುತ್ತದೆ. ಆದುದರಿಂದ ಆ ಲಿಂಗವನ್ನು ಚಕ್ಷುರಾದಿ ಬಾಹ್ಯಕರಣಗಳಿಂದಲೂ ಅಶುದ್ಧವಾದ ಅಂತಃಕರಣದಿಂದಲೂ ನಾವು ತಿಳಿಯುವದಿಲ್ಲಾ ಹಿಂದಿನ ಮಂತ್ರದಲ್ಲಿ ಹೇಳಿದ ಪ್ರಕಾರ ಲಿಂಗಾಂಗ ಸಾಮರಸ್ಯರೂಪವಾದ ಶಿವಯೋಗಾಭ್ಯಾಸದಿಂದ ಮಾತ್ರ ತಿಳಿಯಲು ಯೋಗ್ಯವಾಗುವದು. ಆದ್ದರಿಂದ ಎಲೈ ಶಿಷ್ಯನೇ ಕೇಳು ಇಗೊ ಇದೆ ಪರಶಿವಲಿಂಗವೆಂದು ಘಟಪಟದಂತೆ ತೋರಿಸಲಿಕ್ಕೆ ಬರುವದಿಲ್ಲಾ ಪರಂತು ಪೂರ್ವಾಚಾರ್ಯರು ನಮಗೆ ಯಾವ ಪ್ರಕಾರವಾಗಿ ಉಪದೇಶಮಾಡಿರುವರೊ? ಹಾಗೆ ನಾವೂಕೂಡಾ ಹೇಳುತ್ತೇವೆ. ಆ ಪರಶಿವಲಿಂಗವು ಕೇವಲ ಕಾರಣವೂ ಅಲ್ಲಾ ಕೇವಲ ಕಾರ್ಯವೂ ಅಲ್ಲಾ. ಕಾರಣಕ್ಕಿಂತಲೂ ಕಾರ್ಯವು ಅಸತ್ತಾಗಿದೆ ಕಾರಣವು ಕಾರ್ಯಕಿಂತಲೂ ಸತ್ತಾಗಿದೆ ಆದ್ದರಿಂದ ಕಾರ್ಯವು ಅಸತ್ತಂತಲೂ ಕಾರಣವು ಸತ್ತಂತಲೂ ಪೂರ್ವಾಚಾರ್ಯರು ಹೇಳಿದ ಪ್ರಕಾರ ಶ್ರೀಶಾಂಕರೀಕಾರನು ಹೇಳಿದ್ದಾನೆ ವಟ್ಟನಮೇಲೆ ಆ ಪರಬ್ರಹ್ಮವು ಕೇವಲ

ನಾತ್| ಅನ್ಯಥಾ ತವ ವಿರೋಧಸ್ಫೂರ್ತಿರೇವ ನಸ್ಯಾತ್. ನಸ್ಯಾಚ್ಚ" ಸತ್ಯಮ
ನೃತಂಚ ಭಾವಗ್ರಾಹ್ಯಮನೀಡಾಖ್ಯಂ ಭಾವಾಭಾವಕರಂಶಿವಂ" ಸದಸಚ್ಚಾಹ
ಮರ್ಜುನ ಇತಿ ಶ್ರುತಿಸ್ಮೃತ್ಯಾದೇಃ ಪ್ರಾಮಾಣ್ಯಂ. ಇತಿ ಇತ್ಥಮುಕ್ತಂ
ವಚನಂ ಪೂರ್ವೇಷಾಂ ಗುರೂಣಾಂ ಶುಶ್ರುಮ ವಯಂ ಶ್ರುತವಂತಃ ತೇ ಕೇ
ಗುರವಃ ಇತ್ಯತಆಹ ಯೆ ಇತಿ, ಯೇ ಶಿವತತ್ವವಿದಃ ನಃ ಅಸ್ಮಭ್ಯಂದೀಕ್ಷಿತೇಭ್ಯಃ
ತತ್ ಪರಶಿವಲಿಂಗಂ | ಶ್ರೋತ್ರಾದೇಃ ಶ್ರೋತ್ರಾದಿರೂಪಂ | ಶ್ರೋತ್ರಾದ್ಯವಚ್ಛಿ
ನ್ನ ಪ್ರಸಾದಾದಿಲಿಂಗರೂಪಂ ಸತ್ ಯದ್ವರ್ತತೇ ತದಿತ್ಯರ್ಥಃ. ವ್ಯಾಚಚಕ್ಷಿರೆ
ಉಕ್ತವಂತಃ | ಏತೇನ ಗುರುಮುಖಾದೇವ ಸ್ವಸ್ವರೂಪ ಶಿವಲಿಂಗಸಾಮರಸ್ಯ
ಜ್ಞಾನಂ ಭವತಿ | ನಾನ್ಯಥೇತಿ ಸೂಚಿತಂ | ಸೂತ್ರಿತಂಚ ಶಿವೇನಾಪಿ" ಗುರು

---

ಕಾರಣಸ್ವರೂಪವಲ್ಲವು. ಕೇವಲ ಕಾರ್ಯಸ್ವರೂಪವೂ ಅಲ್ಲವು ಕಾರ್ಯಕಾರಣಗಳೆರಡರ
ಸ್ವರೂಪವಾಗಿರುವುದು. ಈ ವಿಷಯದಲ್ಲಿ ಶ್ರುತಿ ಸ್ಮೃತಿ ವಾಕ್ಯಗಳ ಪ್ರಮಾಣವು ಶಾಂಕರಿ
ಯಲ್ಲಿ ತೋರಿಸಲ್ಪಟ್ಟಿರುವುದು ಕಾರಣ ಕಾರ್ಯ ಉಭಯ ರೂಪಗಳಾದ ಸತ್ವಾಸತ್ವಗಳನ್ನು
ಬ್ರಹ್ಮದಲ್ಲಿ ಹೇಳುವದು ಅನುಭವ ವಿರುದ್ಧವಲ್ಲವೆ ? ಒಂದರಲ್ಲಿ ಸತ್ವಾಸತ್ವಗಳಿಗೆ ವಿರೋಧವೆ
ನ್ನುವ ನಿನ್ನ ಜ್ಞಾನದಲ್ಲಿ ಹ್ಯಾಗೆ ಅವುಗಳಿಗೆ ವಿರೋಧ ವಿಲ್ಲವೊ? ಅದರಂತೆ ಚಿಜ್ಜ್ಯೋತೀ ರೂಪ
ವಾದಪರಶಿವಲಿಂಗದಲ್ಲಿ ಅವುಗಳಿಗೆ ವಿರೋಧವಿಲ್ಲವೆಂದು ಏಕೆ ತಿಳಿಯಬಾರದು. ನಿನ್ನ ಜ್ಞಾನದ
ಲ್ಲಿ ಸತ್ವಾಸತ್ವಗಳಿರದಿದ್ದರೆ ಅವುಗಳಿಗೆ ವಿರೋಧವೆಂಬ ಜ್ಞಾನವಾದರೂ ನಿನಗೆ ಹೇಗಾದೀತು?
ಆದ್ದರಿಂದ ಅವುಗಳಿಗೆ ವಿರೋಧವೇ ಇಲ್ಲವೆಂದು ಅಂಗೀಕರಿಸಬೇಕು ಹಾಗೂ ವಿರೋಧವನ್ನು
ಹೇಳುವಪಕ್ಷದಲ್ಲಿ "ಸತ್ಯಮನೃತಂಚ. | ಸದಸಚ್ಚಾಹಮರ್ಜುನ| ಇತ್ಯಾದಿ ಶ್ರುತಿ ಸ್ಮೃತಿ ವಾ
ಕ್ಯಗಳಿಗೆ ಹೇಗೆ ಪ್ರಾಮಾಣ್ಯವಂ ಅಂಗೀಕರಿಸಬೇಕು? ಆದಕಾರಣ ಹಿಂದೆ ಶ್ರೋತ್ರಕ್ಕೆ ಶ್ರೊತ್ರವು
ಮೊದಲಾದ ಶ್ರುತಿಗಳಿಂದ ಹೇಳಲ್ಪಟ್ಟ ಪರಶಿವಬ್ರಹ್ಮವು ಸದಸದ್ರೂಪವಾಗಿರುವುದು. ಆದ
ಕಾರಣದಿಂದ ಸದ್ರೂಪಕಾರಣವಾದ ಭಾವಲಿಂಗದಲ್ಲಿ ಮನಸ್ಸು ಮೊದಲಾದ ಇಂದ್ರಿಯಗಳ
ಪ್ರವೇಶವಿಲ್ಲವು ಅಸದ್ರೂಪವಾದ ಕಾರ್ಯ ಬ್ರಹ್ಮದಲ್ಲಿ ಅಂದರೆ ಪ್ರಾಣಲಿಂಗಾದಿಗಳಲ್ಲಿ ಮ
ನಸ್ಸು ಮೊದಲಾದವುಗಳ ಪ್ರವೇಶವಾಗುತ್ತದೆ. ಎಂದು ಶಿವಜ್ಞಾನಿಗಳಾದ ಪೂರ್ವಾಚಾರ್ಯರ
ವಚನವನ್ನು ನಾವು ಕೇಳಿದ್ದೇವೆ. ಇದರಿಂದ ಪ್ರಾಚೀನರಾದ ಶಿವಾಚಾರ್ಯರ ಮುಖದಿಂದ
ಸ್ವಸ್ವರೂಪವಾದ ಲಿಂಗ ಮತ್ತು ಅಂಗ ಇವುಗಳ ಸಾಮರಸ್ಯ ಜ್ಞಾನವಾಗುತ್ತದಲ್ಲದೆ ಬೇರೆ
ಯಾವುದರಿಂದಲೂ ಆಗುವದಿಲ್ಲವೆಂದು ಸೂಚಿತವಾಯಿತು. ಆದ್ದರಿಂದಲೇ ಗುರುವೇ ಉಪಾಯ
ನು ಎಂದು ಶಿವಸೂತ್ರದಲ್ಲಿ ಹೇಳಲ್ಪಟ್ಟಿರುವುದು. ಗುರೂಪದೇಶದಿಂದಲೇ ಪರಶಿವಲಿಂಗಸ್ವ
ರೂಪವು ಅಳವಡುವುದಲ್ಲದೆ ಇತರ ಶಾಸ್ತ್ರಗಳಿಂದ ಅಂದರೆ ಶಿವಸ್ವರೂಪವನ್ನು ಪ್ರತಿಪಾದಿಸುವ
ಅಸಂಖ್ಯಾತವಾದ ಶಾಸ್ತ್ರಗಳಿಂದ ಸಾಧ್ಯವಲ್ಲದುದರಿಂದ ಶಿವತತ್ವ ಬೋಧಕಗಳಾದ ಶಾಸ್ತ್ರಗಳ

ರುಪಾಯ ಇತಿ | ಉಕ್ತಂಚಾನುಭವಸೂತ್ರೇ | ಗುರೂಪದೇಶತಃ ಸಾಧ್ಯಂನಾ
ನ್ಯಥಾ ಶಾಸ್ತ್ರಕೋಟಿಭಿರಿತಿ ||೩||

ಪ್ರಥಮಮಂತ್ರೋಕ್ತ ಪ್ರಶ್ನವಾಕ್ಯಾನಾಂ ದ್ವಿತೀಯಮಂತ್ರೇಣ ಪ್ರತಿವ
ಚನಸ್ಯೋಕ್ತತ್ವೇಪಿ ಶಿಷ್ಯಬುದ್ಧಿ ವೈಶದ್ಯಾರ್ಥಂ ಏಕೈಕಪ್ರಶ್ನಸ್ಯೈಕೈಕಮಂತ್ರೇಣ
ಪ್ರತಿವಚನಮುಚ್ಯತೇ. ತತ್ರ ಆಕಾರಾದಿ ಪರಿಚ್ಛಿನ್ನ ವಿಷ್ಣ್ವಾದೌ ಸ್ವಾತಿರಿಕ್ತತ್ವೇ
ನೋಪಾಸನಾ ಪ್ರಕಾರಃ ಬ್ರಹ್ಮಬುದ್ಧಿಶ್ಚ ಮಾಭೂದಿತಿ ಶ್ರುತೇರೇವ ಗುರುರೂ
ಪೇಣ ಪ್ರತಿಮಾಕಾರಾದಿ ಪರಿಚ್ಛಿನ್ನಂ ನ ಬ್ರಹ್ಮ' ಕಿಂತು ತಲ್ಲಿಂಗಂ ಪರಮಂ
ಬ್ರಹ್ಮ ಸಚ್ಚಿದಾನಂದಲಕ್ಷಣಂ ಇತಿ ಸಿದ್ಧಾಂತಾಗಮೋಕ್ತ ಪ್ರಕಾರೇಣ ತದೇವ
ಬ್ರಹ್ಮತ್ವಂ ವಿದ್ಧೀತ್ಯುಪದಿಶತಿ ಯದ್ವಾಚೇತಿ ||

ಮೂ|| ಯದ್ವಾಚಾನಭ್ಯುದಿತಂ ಯೇನವಾಗಭ್ಯುದ್ಯತೇ |
ತದೇವಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾ
ಸತೇ ||೪||

---

ರ್ಥವನ್ನೇ ಬೋಧಿಸುವ ಪಂಚಾಕ್ಷರೀ ಮೊದಲಾದ ಮಂತ್ರಗಳಂ ಉಪದೇಶಿಸುವ ಶಿವಾಚಾ
ರ್ಯರ ಉಪದೇಶವನ್ನು ಪಡೆದು ಶಿವತತ್ವವನ್ನು ಸಾಕ್ಷಾತ್ಕಾರಮಾಡಿಕೊಳ್ಳತಕ್ಕುದೆಂದು
ಅನುಭವಸೂತ್ರವೂ ಹೇಳುವುದು. ||೩||

ಅ|| ಮೊದಲಿನ ಮಂತ್ರದಲ್ಲಿರುವ ಪ್ರಶ್ನೆಗಳಿಗೆ ಎರಡನೆಯ ಮಂತ್ರದಲ್ಲಿ ಉತ್ತರವು ಹೇಳ
ಲ್ಪಟ್ಟಿದ್ದರೂ ಶಿಷ್ಯನ ಬುದ್ಧಿಯು ಮತ್ತಿಷ್ಟು ವಿಶದವಾಗಲಿ ಎಂಬುದ್ದೇಶದಿಂದ ಒಂದೊಂದು ಪ್ರ
ಶ್ನಕ್ಕೆ ಪೂರ್ತಿಯಾದ ಒಂದೊಂದು ಮಂತ್ರದಿಂದಲೇ ಉತ್ತರವು ಹೇಳುತ್ತ, ಶಿಲಾದಿಪ್ರತಿಮಾಕಾರ
ದ್ದೀಪ ಕೂಡಿದ ವಿಷ್ಣ್ವಾದಿ ದೇವತೆಗಳಲ್ಲಿ ಉಪಾಸಕರು ತಮಗಿಂತಲೂ ಬೇರೆಯೆಂಬ ಭಿನ್ನಭಾ
ವವನ್ನು ಸ್ಪೊಂದಿ ಉಪಾಸನೆ ಮಾಡುವುದೂ, ಆ ವಿಷ್ಣ್ವಾದಿ ದೇವತೆಗಳಲ್ಲಿ ಬ್ರಹ್ಮ ಬುದ್ಧಿಯೂ,
ಉಂಟಾಗಬಾರದೆಂಬುದ್ದೇಶದಿಂದ ಪ್ರತಿಮಾಕಾರದಿಂದ ಪರಿಚ್ಛಿನ್ನರಾದ ವಿಷ್ಣ್ವಾದಿಗಳಲ್ಲಿ
ಬ್ರಹ್ಮತ್ವವಿಲ್ಲವು. ತಲ್ಲಿಂಗಂ ಪರಮಂ ಬ್ರಹ್ಮ ಸಚ್ಚಿದಾನಂದ ಲಕ್ಷಣಂ | ಎಂಬ ಸಿದ್ಧಾಂ
ತವಾಕ್ಯಕ್ಕನುಸಾರವಾಗಿ,, ತದೇವ ಅಂದರೆ ಆ ಲಿಂಗವೇ ಬ್ರಹ್ಮವು ಅದನ್ನೇ,, ನೀನು ಉಪಾ
ಸನೆಮಾಡು ಎಂದು ಶ್ರುತಿಯೇ ಗುರುರೂಪದಿಂದ ಯದ್ವಾಚಾ ಎಂಬ ಮಂತ್ರದಿಂದ ಶಿಷ್ಯನಿಗೆ
ಬೋಧಿಸುತ್ತದೆ

ಶಬ್ದಪ್ರಮಾಣವು ಬ್ರಹ್ಮಾತಿರಿಕ್ತವಾದುದೆಂಬ ಮತದಲ್ಲಿ ಪೂರ್ವೋಕ್ತವಾದ ಯಾವ ಶರೀ
ರಲಿಂಗವುಂಟೋ? ಅದು ಶಬ್ದದಿಂದ ಪ್ರಕಾಶಿಸಲ್ಪಡುವದಿಲ್ಲವು ಯಾವ ಪ್ರಸಾದಲಿಂಗರೂಪವಾದ
ಪರಶಿವಲಿಂಗದಿಂದ ಶಬ್ದವು ಯಾವ ಯಾವ ಅರ್ಥವನ್ನು ಪ್ರಕಾಶಗೊಳಿಸುತ್ತದೆಯೋ ಅದೇ ಬ್ರ

ಯದಿತಿ, ಯಚ್ಛಬ್ದ ಪೂರ್ವೋಕ್ತಂ ಪರಶಿವಲಿಂಗಂ ವಾಚಾ ವರ್ಣಪದಾದಿರೂಪಯಾ ಅನಭ್ಯುದಿತಂ ಅಪ್ರಕಾಶಿತಂ ಯೇನ ಪ್ರಸಿದ್ಧೇನ ಪ್ರಸಾದಲಿಂಗರೂಪೇಣ ವಾಕ್ | ಅಭ್ಯುದ್ಯತೇ ತತ್ತದರ್ಥೇಪ್ರಕಾಶ್ಯತೇ | ತದೇವ ಪರಶಿವಲಿಂಗಮೇವಬ್ರಹ್ಮ "ಬೃಹತ್ವಾಚ್ಚ ಬೃಂಹಣತ್ವಾಚ್ಚ ಬ್ರಹ್ಮಶಬ್ದಾಭಿಧೇಯಕಮಿತ್ಯರ್ಥಃ ಅತ ಏವ ಶಿವಾತಿರಿಕ್ತಸ್ಯಾಬ್ರಹ್ಮತ್ವಮುಕ್ತಂ | ನನು "ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ ನಾರಾಯಣ ಪರೋಜ್ಯೋತಿರಾತ್ಮಾ ನಾರಾಯಣಃ ಪರಃ| ನಾರಾಯಣ ಪರೋಧ್ಯಾತಾ ಧ್ಯಾನಂ ನಾರಾಯಣಃ ಪರಃ | ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಪಿವಾ | ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಃ ಸ್ಥಿತಃ" | ಇತ್ಯಾದಿ ಶ್ರುತಿಶತಸತ್ವಾತ್, ಶಿವಲಿಂಗಾತಿರಿಕ್ತ ನಾರಾಯಣಾದೇಃ ಕಥಮಬ್ರಹ್ಮತ್ವಮಿತಿ ಚೇನ್ನ | ತತ್ರನಾರಾಯಣಶಬ್ದಸ್ಯ ಶಿವಪರತ್ವಾತ್" | ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ" ಸೋಮಃ ಪವತೇ ಜನಿತಾ ಪೃಥಿವ್ಯಾಜನಿತಾಗ್ನೇಃ ಜನಿತಾಸೂರ್ಯಸ್ಯ ಜನಿತೇಂದ್ರಸ್ಯ ಜನಿತೋಥವಿಷ್ಣೋಃ" ಇತ್ಯಾದಿ ಶ್ರುತೇಃ | ವಿಷ್ಣ್ವಾದೀನಾಂ ಶಿವೋಪಾದಾನತಯಾ ಶಿವಾತ್ಮಕತ್ವಾತ್ | ತದನನ್ಯತ್ವಮಾರಂಭಣ

---

ಹ್ಮವು. ಆ ಬ್ರಹ್ಮರೂಪವಾದ ಲಿಂಗವು ಸೃಷ್ಟಿಗುನ್ಮುಖವಾಗಿರುವುದರಿಂದಲೂ ಸರ್ವತ್ರ ವ್ಯಾಪಕವಾಗಿರುವುದರಿಂದಲೂ ಬ್ರಹ್ಮ ಶಬ್ದದಿಂದ ಹೇಳಿಸಿಕೊಳ್ಳಲ್ಪಡುತ್ತೆಂದು ಶ್ರೀ ರೇಣುಕ ಭಗವತ್ಪಾದರು ಅಗಸ್ತ್ಯಮಹರ್ಷಿಗಳಿಗೆ ಉಪದೇಶ ಮಾಡಿರುವರು. ಈ ಮಂತ್ರದಲ್ಲಿರುವ ಏವ ಎಂಬ ಶಬ್ದದಿಂದ ಶಿವಾತಿರಿಕ್ತಗಳಾದ ದೇವತೆಗಳಲ್ಲಿ ಬ್ರಹ್ಮತನವಿಲ್ಲೆಂದು ಪ್ರಕಾಶಗೊಳಿಸಲ್ಪಟ್ಟಿತು. ಹಾಗಾದರೆ ನಾರಾಯಣಂ ಮಹಾಜ್ಞೇಯಂ ಮೊದಲುಗೊಂಡು ವ್ಯಾಪ್ಯನಾರಾಯಣಸ್ಥಿತಃ | ಎಂಬುವವರಿವಿಗೂ ಇರುವ ಶ್ರುತಿವಾಕ್ಯಗಳಲ್ಲಿ ಅನೇಕಾವರ್ತಿ ನಾರಾಯಣನಿಗೇನೆ. ಬ್ರಹ್ಮವೆಂದು ಹೇಳಿದೆ? ಅಂದರೆ, ಇಲ್ಲಿ ನಾರಾಯಣನೆಂದರೆ ಶಿವನೆಂದು ಅರ್ಥ ಮಾಡಬೇಕು. ದಶಾವತಾರಗಳನ್ನೆತ್ತಿದ ವಿಷ್ಣುವೆಂದು ಅರ್ಥ ಮಾಡಬಾರದು. ಯಾಕೆಂದರೆ, ಕಾರ್ಯಕಾರಣಗಳಿಗೆ ಅಭೇದವಿರುವದರಿಂದ ಶಿವನಿಂದ ಹುಟ್ಟಿದ ನಾರಾಯಣನಿಗೆ ಬ್ರಹ್ಮವೆಂದು ಶ್ರುತಿಯಲ್ಲಿ ಒಮ್ಮೊಮ್ಮೆ ಹೇಳಿರುವುದು. ಬ್ರಹ್ಮವಿಷ್ಣ್ವಾದಿಗಳು ಶಿವನಿಂದ ಹುಟ್ಟಿರುವರೆಂಬುವಲ್ಲಿ ವ್ಯಾಖ್ಯಾನಕಾರನು ಅನೇಕ ಶ್ರುತಿಗಳನ್ನು ತೋರಿಸಿದ್ದಾನೆ. ಮತ್ತು ಕಾರ್ಯಕಾರಣಗಳಿಗೆ ಅಭೇದವೆಂಬುವ ವಿಷಯದಲ್ಲಿ "ತದನನ್ಯತ್ವಮಾರಂಭಣ ಶಬ್ದಾದಿಭ್ಯಃ" ಎಂಬ ಬ್ರಹ್ಮಸೂತ್ರವು ಪ್ರಮಾಣವಾಗಿದೆ. ಅದ್ದರಿಂದ ನಾರಾಯಣಾದಿ ಸಮಸ್ತ ಶಬ್ದಗಳಿಂದ ಆ ಪರಶಿವನೇ ವಾಚ್ಯನಾಗುವನೆಂಬುವದು ಸಮಂಜಸವಾಗಿರುವುದು. ನಾರಾಯಣೋಪನಿಷತ್ತಿನ ಉಪಸಂಹಾರವಾಕ್ಯವೇ 'ಋತಾ ರುದ್ರಸ್ವರೂಪವೆಂಬಲ್ಲಿ, ಅವನಿಗೋಸ್ಕರ ನಮಸ್ಕಾರಗಳೆಂತಲೂ ಹೇಳುತ್ತದೆ. ಮತ್ತು

ಶಬ್ದಾದಿಭ್ಯಃ ॥ ಇತ್ಯಧಿಕರಣೆ ಕಾರ್ಯಕಾರಣಯೋರನನ್ಯತ್ವವ್ಯಪದೇಶಾತ್ । ನಾರಾಯಣಾದಿ ಸರ್ವಶಬ್ದವಾಚ್ಯತ್ವಮಪಿ ಶಿವಸ್ಯ ಸಮಂಜಸಂ ಭವತಿ।ಅತಸ್ತ ದುಪಸಂಹಾರೇ॥ ಸರ್ವೋವೈರುದ್ರಸ್ತಸ್ಮೈ ರುದ್ರಾಯನಮಃ॥ ಇತ್ಯಾದಿನಾ ರುದ್ರಸ್ಯ ಸರ್ವಾತ್ಮಕತ್ವಮುಪದಿಷ್ಟಂ । ಕಿಂಚ ಶಿವಪರತ್ವಂಚ । ಅರಾಃ ಪ್ರಾಕ್ತ ಧನಾಭಾವಂ ಸುಖಾಭಾವಂಪದಂತ್ಯಣಃ। ಸತೌ ಸ್ಯಾತಾಂ ಯಸ್ಯಭಕ್ತೇಃ ಸವೈ ನಾರಾಯಣಃ ಶಿವಃ ॥ ಇತ್ಯಾದಿನೋಕ್ತಂ । ತ್ವಂ ವಿದ್ಧಿ ಜಾನೀಹಿ । ಏತೇನ ತೇನೇಷಿತಾಂ ವಾಚಮಿಮಾಂ । ಇತ್ಯಸ್ಯ ಪ್ರತಿವಚನಮುಕ್ತಂ । ತದೇವೇತ್ಯೇ ವಕಾರೇಣ ಶಿವಲಿಂಗಾತಿರಿಕ್ತಸ್ಯಾಬ್ರಹ್ಮತ್ವೇ ಉಕ್ತೇಪಿ ನೇದಮಿತ್ಯನೇನಪುನರ ಬ್ರಹ್ಮತ್ವಮುಚ್ಯತೆ. ಯದಿದಂ ಆಕಾರಾದಿಪರಿಚ್ಛಿನ್ನಂ ವಿಷ್ಣ್ವಾದಿ ಸ್ವಾತಿರಿಕ್ತತ ಯಾ. ಉಪಾಸತೆ ಕೇಚಿನ್ನೇದಂ ಬ್ರಹ್ಮ ಉಕ್ತಂಚೇಶ್ವರೇಣ ವಸಿಷ್ಠಂಪ್ರತಿ ॥ ಶೃ ಣುಬ್ರಹ್ಮವಿದಾಂ ಶ್ರೇಷ್ಠ ದೇವಾರ್ಚನಮನುತ್ತಮಂ । ನದೇವಃ ಪುಂಡರೀ ಕಾಕ್ಷೋ ನಚದೇವ ಸ್ತ್ರಿಲೋಚನಃ ॥ ನದೇವೋ ದೇವರೂಪೋಹಿ ನದೇವಶ್ಚಿತ್ತ ರೂಪಕಃ । ಅಕೃತ್ರಿಮಮನಾದ್ಯಂತಂ ದೇವನಂ ದೇವಉಚ್ಯತೆ । ಆಕಾರಾದಿ ಪರಿಚ್ಛಿನ್ನೇಮಿತೆ ವಸ್ತುನಿ ತತ್ಕುತಃ । ಅಕೃತ್ರಿಮಮನಾದ್ಯಂತಂದೇವನಂ ಚಿಚ್ಛಿವಂ

---

ಶಿವನಿಗೆ ನಾರಾಯಣನೆಂದು ಹೆಸರು ಬರಲಿಕ್ಕೆ ಕಾರಣವೇನಂದರೆ—ಅರಾ ಎಂಬ ಪದವು ನಿರ್ಧನತ್ವವನ್ನು ಬೋಧಿಸುತ್ತದೆ. ಅಣ ಎಂಬುವದು ದುಃಖವನ್ನು ಹೇಳುತ್ತದೆ. ಯಾವ ಶಿವ ನಲ್ಲಿರುವ ಭಕ್ತಿಯಿಂದ ಇವೆರಡೂ ನಷ್ಟಗಳಾಗುವವೋ ಆ ಶಿವನೇ ನಾರಾಯಣನು. ಎಂದು ಸಿದ್ಧಾಂತಾಗಮವು ಹೇಳುತ್ತಿರುವುದರಿಂದ, ಪರಶಿವಲಿಂಗವೇ ಬ್ರಹ್ಮವು. ಅದನ್ನೇ ನೀನು ಬ್ರಹ್ಮವೆಂದು ತಿಳಿ. ಏವಕಾರದಿಂದ ಶಿವಲಿಂಗಾತಿರಿಕ್ತವಾದ ದೇವತೆಗಳಲ್ಲಿ ಬ್ರಹ್ಮತನವಿಲ್ಲೆಂದು ಹೇಳಿದ್ದರೂ, ಮತ್ತು ಅವರಲ್ಲಿ ಬ್ರಹ್ಮತ್ವವಿಲ್ಲೆಂದೇ ಹೇಳುತ್ತದೆ ಆಕಾರದಿಂದ ಪರಿಚ್ಛಿನ್ನ ರಾದ ಯಾವ ವಿಷ್ಣ್ವಾದಿ ದೇವತೆಗಳನ್ನು ಕೆಲವರು ಉಪಾಸಿಸುತ್ತಿರುವರೋ? ಆ ದೇವತೆಗಳ ಲ್ಲಿ ಬ್ರಹ್ಮತನವಿಲ್ಲ. ಈ ವಿಷಯದಲ್ಲಿ ಯೋಗವಾಸಿಷ್ಠದ ವಾಕ್ಯಗಳೂ ಕೂಡ ಪ್ರಮಾಣ ಗಳಾಗಿವೆ. ಆಕಾರಾದಿ ಪರಿಚ್ಛಿನ್ನವಾದ ಮಿತವಾದ ವಸ್ತುವಿನಲ್ಲಿ ದೇವತ್ವವಿಲ್ಲೆಂದೂ, ಚಿಚ್ಛಿವನೇ ದೇವನೆಂದೂ, ಶಿವತತ್ವದ ಜ್ಞಾನವಿಲ್ಲದವನಿಗೋಸ್ಕರನಾಗಿ ಆಕಾರಾದಿಗಳ ಪೂಜೆಯು ಹೇಳಲ್ಪಟ್ಟಿದೆ ಎಂದೂ. ಒಂದು ಯೋಜನ ಪರಿಮಿತವಾದ ಮಾರ್ಗವನ್ನು ಹಿಡಿದು ನಡೆಯಲ್ಲಾರದವನಿಗೆ ಒಂದು ಕ್ರೋಶಪರಿಮಿತವಾದ ಮಾರ್ಗವನ್ನು ಕಲ್ಪಿಸಿಕೊಟ್ಟಂತೆ, ಶಿವತತ್ವ ಜ್ಞಾನವಿಲ್ಲದ ಮಂದಾಧಿಕಾರಿಗಳಿಗೋಸ್ಕರವಾಗಿ ಆಕಾರಾದಿಗಳುಳ್ಳದೇವತೆಗಳ ಪೂಜೆಯು ಹೇ ಳಲ್ಪಟ್ಟಿರುವುದೇಹೊರತು ಉತ್ತಮಾಧಿಕಾರಿಯಾದವನಿಗೆ ಆ ಪರಿಚ್ಛಿನ್ನ ದೇವತೆಗಳ ಅರ್ಚನೆಯು

ವಿದುಃ | ಅಜ್ಞಾತ ಶಿವತತ್ತ್ವಾನಾಮಾಕಾರಾದ್ಯರ್ಥಸಂಕ್ರಮಂ | ಯೋಜನಾರ್ಥ್ವಸ್ಯಶಕ್ತಸ್ಯ ಕ್ರೋಶಾರ್ಧ್ವಾಪರಿಕಲ್ಪ್ಯತೇ || ನನುಲಿಂಗಸ್ಯಾಪ್ಯಾಕಾರಸತ್ತ್ವಾತ್ | ಕಥಂ ತದ್ಬ್ರಹ್ಮ ಇತಿ ಚೇನ್ನ | ವಸ್ತುತಸ್ತ್ವಾಕಾರಶೂನ್ಯತ್ವಾತ್ || ಪ್ರತಿಮಾಕಾರಶೂನ್ಯಸ್ಯ ಲಿಂಗಸ್ಯ ಪರಮಾತ್ಮನಃ ಪ್ರತಿಮಾಕಾರದೇವಾನಾಂ ಸಾದೃಶ್ಯಂಕಥಮಿಹಾರ್ಯತೇ. || ಇತ್ಯಾದಿಸಿದ್ಧಾಂತಾಗಮೋಕ್ತೇಃ | ತತ್ಪರ ಶಿವಲಿಂಗಮೇವಬ್ರಹ್ಮ ತದೇವೋಪಾಸ್ಯಂ ತಸ್ಮಾಲ್ಲಿಂಗಂ ಪರಂಬ್ರಹ್ಮ ಸಚ್ಚಿದಾನಂದಲಕ್ಷಣಂ | ನಿಜರೂಪಮಿತಿ ಧ್ಯಾನಾತ್ತದವಸ್ಥಾ ಪ್ರಜಾಯತೇ || ಬ್ರಹ್ಮವಿಷ್ಣ್ವಾದಯೋ ದೇವಾ ಸ್ಸರ್ವೇವೇದಾದಯಸ್ತಥಾ | ಲೀಯಂತೇ ಯತ್ರಗಮ್ಯಂತೇ ತಲ್ಲಿಂಗಂ ಬ್ರಹ್ಮಕೇವಲಂ || ಚಿದಾನಂದಮಯಃ ಸಾಕ್ಷಾಚ್ಛಿವಏವ ನಿರಂಜನಃ ಲಿಂಗಮಿತ್ಯುಚ್ಯತೇನಾನ್ಯದ್ಯತಃಸ್ಯಾದ್ವಿಶ್ವಸಂಭವಃ || ಬಹುನಾತ್ರಕಿಮುಕ್ತೇನ ಲಿಂಗಮಿತ್ಯುಚ್ಯತೇ ಬುಧೈಃ | ಶಿವಾಭಿದಂ ಪರಂಬ್ರಹ್ಮ ಚಿದ್ರೂಪಂ ಜಗದಾಸ್ಪದಂ || ಇತ್ಯಾದಿನಾ ಶಿವಲಿಂಗಸ್ಯೈವ ಪರಬ್ರಹ್ಮತ್ವಂ ತದುಪಾಸ್ಯತ್ವಂ ಸ್ವಾತಿರಿಕ್ತಾನುಪಾಸ್ಯತ್ವಾದ್ಯುಕ್ತತ್ವಾತ್ | ತಚ್ಛಿವಲಿಂಗಸ್ಯೈವ ಪರಬ್ರಹ್ಮತ್ವಂ ತಸ್ಯೈವೋಪಾಸ್ಯತ್ವಂ ಸಿಧ್ಯತಿ. ನನುಸ್ವಾನತಿರಿಕ್ತತ್ವೇನ ಕಥಮುಪಾಸನಾಸಂಗಚ್ಛತೇ | ಉಪಾಸ್ಯೋಪಾಸಕಭಾವಸ್ಯ ಭೇದಘಟಿತತ್ವಾತ್ ಇತಿ ಚೇನ್ನ | ನಾತ್ಮನಃ ಪರದೇವತಾ " ಇತ್ಯುಕ್ತೇರಾತ್ಮಾನ್ಯ ದೇವತಾಭಾ

---

ಹೇಳಲ್ಪಟ್ಟಿಲ್ಲವೆಂದೂ ಮೊದಲಾದ ಅರ್ಥಗರ್ಭಿತವಾದ ವಾಕ್ಯಗಳೂ ಪ್ರಮಾಣಗಳಾಗಿವೆ. ಹಾಗಾದರೆ ಲಿಂಗಕ್ಕೆ ಆಕಾರವಿಲ್ಲವೋ? ಅದಕ್ಕೆ ಆಕಾರವಿದ್ದಪಕ್ಷದಲ್ಲಿ ಅದು ಹೇಗೆ ಬ್ರಹ್ಮವೆನಿಸುವದು? ಅಂದರೆ ಅದಕ್ಕೆ ವಸ್ತುತಃ ಆಕಾರವೇ ಇಲ್ಲವು. ಆಕಾರವೆಂದರೆ ಪ್ರತಿಮಾಕಾರವಲ್ಲವೆ? ಅದು ಲಿಂಗಕ್ಕೆ ಎಲ್ಲಿಂದ ಬರುವುದು ? ಈ ವಿಷಯದಲ್ಲಿ 'ಪ್ರತಿಮಾಕಾರಶೂನ್ಯಸ್ಯ' ಎಂಬ ಸಿದ್ಧಾಂತಾಗಮದ ಪ್ರಮಾಣವಿದೆ. ಆದ್ದರಿಂದ ಪ್ರತಿಮಾಕಾರವಿಲ್ಲದ ಪರಶಿವಲಿಂಗವೇ ಬ್ರಹ್ಮವು. ಅದನ್ನೇ ಉಪಾಸನೆಯಂ ಮಾಡಲಿಕ್ಕೆ ಯೋಗ್ಯವು. ಆದುದರಿಂದ ಸಚ್ಚಿದಾನಂದರೂಪವಾದ ಲಿಂಗವೇ ಬ್ರಹ್ಮವೆಂತಲೂ, ಅದು ತನ್ನ ಸ್ವರೂಪವೆ ಎಂದು ತಿಳಿದು ಧ್ಯಾನಮಾಡುವುದರಿಂದ ಶಿವಾವಸ್ಥೆಯು ಉಂಟಾಗುವದೆಂತಲೂ, ಬ್ರಹ್ಮವಿಷ್ಣ್ವಾದಿ ದೇವತೆಗಳೂ, ಸಮಸ್ತ ವೇದಗಳೂ ಯಾವವಸ್ತುವಿನಲ್ಲಿ ಹುಟ್ಟಿ ಲೀನಗಳಾಗುತ್ತವೆಯೋ ಅದೇ ಬ್ರಹ್ಮವೆಂತಲೂ ಲಿಂಗವೆಂತಲೂ ಮೊದಲಾದ ಅರ್ಥಗಳಿಂದ ಕೂಡಿದ ಸಿದ್ಧಾಂತಶಿಖಾಮಣಿಯ ವಾಕ್ಯಗಳೂಕೂಡ ಪರಶಿವಲಿಂಗಕ್ಕೇನೇ ಬ್ರಹ್ಮವೆಂದು ಹೇಳುತ್ತವೆಯಲ್ಲದೆ ಆ ಲಿಂಗವೇ ಉಪಾಸ್ಯವು. ಅದುವೇ ಸಚ್ಚಿದಾನಂದರೂಪವು ಎಂದು ಬೋಧಿಸುತ್ತವೆ. ತನಗೆ ಅಭಿನ್ನವಾಗಿ ಉಪಾಸನೆ ಮಾಡುವ ಬಗೆ ಹೇಗೆ? ಉಪಾಸ್ಯೋಪಾಸಕ ಭಾವವು ಭೇದದಿಂದ ಕೂಡಿರುವುದು? ಅಂದರೆ ತನಗಿಂತಲೂ ಬೇರೆ ದೇವರಿಲ್ಲ, ಎಂಬ ಶ್ರುತಿವಾಕ್ಯವಿರುವ

ಅಸತ್ತ್ವಾತ್ | ಆತ್ಮಾತಿರಿಕ್ತೋಽಪಾಸನೇ ಅನಾತ್ಮತ್ವಾಪತ್ತ್ಯಾ ಮುಕ್ತ್ಯಸಂಭವಃ ಸ್ಯಾತ್. ಆತ್ಮಸ್ಥಮತ್ಯಂತರುಚಿಂ ಪ್ರಶಾಂತ ಮಶ್ರಾಂತಮೀಶಂಹಿ ಯಜಂತಿಸಂತಃ || ತಂಬಾಹ್ಯನಾನಾಪ್ರತಿಮಾಸು ಬಾಹ್ಯಕ್ರಿಯಾಭಿರೇವಾಲ್ಪಧಿಯೋಽಯಜಂತಿ || ಇತ್ಯುಕ್ತೇಃ " ಅಥಯೋನ್ಯಾಂದೇವತಾಮುಪಾಸ್ತೇಽನ್ಯೋಽಸಾವನ್ಯೋಽಹಮಸ್ಮೀತಿನಸವೇದ" ಇತಿ ಶ್ರುತೇಃ | " ಆತ್ಮೇತ್ಯೇವೋಪಾಸೀತ" ಇತಿ ಶ್ರುತೇಶ್ಚ, ಶಿವೋಽಹಮಿತಿ ಭಾವೋಽಪಿ ಶಿವತಾಪತ್ತಿಕಾರಣಂ ಇತ್ಯುಕ್ತತ್ವಾತ್ | ನಾಶಿವಸ್ಯ ಶಿವೋಪಾಸ್ತಿರ್ಘಟತೇ ಜನ್ಮಕೋಟಿಭಿಃ | ಶಿವಸ್ಯೈವ ಶಿವೋಪಾಸ್ತಿರಿತಿ ನಾನಾಶ್ರುತಿಸ್ಥಿತಿಃ||ಇತ್ಯನುಭವ ಸೂತ್ರಾಚ್ಚ" ಶಿವೋ ಭೂತ್ವಾ ಶಿವಂ ಯಜೇದಿತಿಶ್ರುತ್ಯಾಪಿ ಸ್ವಾನತಿರಿಕ್ತತ್ವೇಽನ್ಯೈವ ಶಿವೋಪಾಸನಂ ವಿಧೀಯತೇ | ಭ್ರಮದ್ಭ್ರಮರಚಿಂತಾಯಾಂ ಕೀಟಸ್ಯ ಭ್ರಮರತ್ವವತ್ | ಶಿವೋಽಹಮಿತಿಭಾವೇನ ಶಿವೋಭವತಿಚಧ್ರುವಂ, ತಸ್ಮಾತ್ ಕ್ರಿಯಾದ್ವೈತಂ ನಕರ್ತವ್ಯಂ ಭಾವಾದ್ವೈತಂ ಸಮಾಚರೇತ್ | ಅನ್ಯಥಾ ಸರ್ವಾದ್ವೈತ ನಿರಸನಸ್ಥಲ ವಿರೋಧಃ ಸ್ಯಾತ್ | ಅತ ಏವಾನುಭವಸೂತ್ರೇ ಪೂಜಾಕಾಲೇ ಪದಾರ್ಥಕಾಯಃ ಪೂಜಾಂತೇಪ್ರಸಾದಕಾಯ ಇತ್ಯುಕ್ತಂ | ತದ್ದೃಢಭಾವನೋದಯಪರ್ಯಂತಂ ಸ್ವಶಕ್ತಿ

---

ಮೂಲಕ ಆತ್ಮನಿಗೆ ಅತಿರಿಕ್ತವಾದದ್ದು ಎಂದು ತಿಳಿದು ಉಪಾಸನೆಯುಂ ಮಾಡಿದರೆ ಅದಕ್ಕೆ ತಕ್ಕ ಅನಾತ್ಮತ್ವದಫಲವು ಉಂಟಾದೀತು. ಪರಮುಕ್ತಿಯು ಲಭಿಸಲಾರದು, ಅತಿಪ್ರಕಾಶಮಾನವಾದ ತನ್ನಲ್ಲಿರುವ (ತನಗಭಿನ್ನವಾದ)ಈಶನನ್ನು ಸತ್ಪುರುಷರು ಪೂಜಿಸುವರು. ಬಾಹ್ಯಪ್ರತಿಮೆಗಳನ್ನು ಅಲ್ಪಬುದ್ಧಿಯುಳ್ಳವರು ಪೂಜಿಸುವರೆಂತಲೂ ಅಭಿಯುಕ್ತರ ವಾಕ್ಯವಿರುವುದು. ಮತ್ತು ಶಿವನು ತನಗೆ ಭಿನ್ನನೆಂದು ತಿಳಿದು ಉಪಾಸನೆ ಮಾಡಬೇಕೆಂದರೆ ಯಾವನು ತನಗೆನ್ಯವಾಗಿ ಅಂದರೆ ಅವನು ಅನ್ಯನು ನಾನು ಬೇರೆ ಎಂದು ಉಪಾಸನೆ ಮಾಡುವನೋ ಅವನು ತಿಳಿಯುವುದಿಲ್ಲವೆಂಬ ಶ್ರುತಿಗೂ, 'ತಾನೆ ಬ್ರಹ್ಮವೆಂದು ಉಪಾಸನೆಯುಂ ಮಾಡಬೇಕು. ಎಂದು ಬೇರೆ ಶ್ರುತಿವಾಕ್ಯಕ್ಕೆ, ಶಿವನಾಗಿಯೇ' ಶಿವನನ್ನು ಪೂಜಿಸಬೇಕೆನ್ನುವ ಶ್ರುತಿಗೂ ಸಮಂಜಸಗಳಾಗಲಾರವು. ಆದ್ದರಿಂದಲೇ ಅನುಭವಸೂತ್ರವೊಳೂಡ ಶಿವನಿಗೇನೆ ಶಿವೋಪಾಸನೆ ಘಟಿಸುತ್ತದಲ್ಲದೆ ಶಿವನಾಗದವನಿಗೆ ಕೋಟಿ ಜನ್ಮಗಳನ್ನೆತ್ತಿದರೂ ಘಟಿಸುವದಿಲ್ಲವೆಂದೂ ಹೀಗೆ ಅನೇಕ ಶ್ರುತಿಗಳ ಸ್ಥಿತಿ ಇರುವದೆಂದು ಹೇಳುತ್ತದೆ. ಭ್ರಮಿಸುವ ಭ್ರಮರದ ಚಿಂತನೆಯು ಆ ಕೀಟಕ್ಕೆ ದೃಢವಾಗಲು ಆ ಕೀಟವು ಭ್ರಮರವೇ ಆಗುವಂತೆ, ನಾನೇ ಶಿವನೆಂಬ ಭಾವವು ದೃಢವಾಗಲು ಶಿವತ್ವವು ಸಿದ್ಧಿಸುವದು. ಆದ್ದರಿಂದ ಕ್ರಿಯಾದ್ವೈತವನ್ನು ಮಾಡದೆ ಭಾವಾದ್ವೈತವನ್ನು ಆಚರಿಸಬೇಕು ಇಲ್ಲದಿದ್ದರೆ ಸರ್ವಾದ್ವೈತ ನಿರಸನ ಸ್ಥಲಕ್ಕೆ ವಿರೋಧವಾದೀತು ? ಆದ್ದರಿಂದಲೆ ಪೂಜಾಕಾಲದಲ್ಲಿ ಪದಾರ್ಥಕಾಯನಾಗಿಯೂ ಪೂಜಾಂತದಲ್ಲಿ ಅಂದರೆ ಸರ್ವ ಪದಾರ್ಥಗಳನ್ನು ಶಿವಲಿಂಗಕ್ಕರ್ಪಿಸಿದ ಮೇಲೆ ಪ್ರಸಾದ

ವಿಜೃಂಭಿತ ಶಿವಜೀವಯೋಃ ಪೂಜ್ಯಪೂಜಕಯೋರ್ಭೇದಸ್ಯ ಪಾರಮಾರ್ಥಿಕಸ್ಯಸ್ಥಿ ತತ್ವಾತ್, ಏತನ್ಮಂತ್ರೇಣ ಆಕಾರಾದ್ಯವಚ್ಛಿನ್ನ ವಿಷ್ಣ್ವಾದ್ಯುಪಾಸನ ನಿಷೇಧೇನ ಶಿವಲಿಂಗೋಪಾಸನಂಚ ಸೂಚಿತಮಿತಿಜ್ಞಾತವ್ಯಂ ||೪||

ಮೂ || ಯನ್ಮನಸಾ ನಮನುತೆ ಯೇನಾಹುರ್ಮನೋಮ ತಂ । ತದೇವಬ್ರಹ್ಮತ್ವಂವಿದ್ಧಿ ನೇದಂ ಯದಿದ ಮುಪಾಸತೆ ||೫||

ಶಾಂ||ಯತ್ ಪರಶಿವಲಿಂಗಂ, ಮನಸಾ ಅಂತಃಕರಣೇನ, ನಮನುತೇ, ಕೋಪಿನಜಾನಾತಿ| ಯೇನ ಮಹಾಲಿಂಗರೂಪೇಣ,ಮನಃ ಮತಂ |ಜ್ಞಾತಮಾಹುಃ | ಕಥಯಂತಿ ಶಿವಜ್ಞಾನಿನಃ | ತದೇವ ಪರಶಿವಲಿಂಗಮೇವ, ಬ್ರಹ್ಮತ್ವಂ ವಿದ್ಧಿ ನೆದಂ ಇಯದಿದಮುಪಾಸತೆ | ಇತ್ಯಾದಿ ವ್ಯಾಖ್ಯಾತಂ ಪ್ರಾಗೇವ | ತತ್ರೇದ

---

ಕಾಯನೆಂತಲೂ ಹೇಳಿದೆ. ಆದ್ದರಿಂದ ಶಿವಭಾವನೆಯು ದೃಢವಾಗುವಪರಿಯಂತರ ಪೂಜ್ಯಪೂಜಕರುಗಳಿಗೆ ಪಾರಮಾರ್ಥಿಕವಾದ ಬೇದವಿರುವದರಿಂದ ಯಾವ ದೋಷವೂ ಇಲ್ಲಾ. ಅಂದರೆ ಶಿವಪೂಜಾಕಾಲದಲ್ಲಿ ಸಮಸ್ತ ಪದಾರ್ಥಗಳೂ ಪೂಜಿಸುವ ನಾನು ಪೂಜ್ಯನಾದ ಪರಶಿವಲಿಂಗವೂ ಭಿನ್ನಗಳೆಂದು ತಿಳಿದು ಪೂಜಾ ಮುಗಿದಮೇಲೆ ಆ ಯೆಲ್ಲಾ ಪದಾರ್ಥಗಳು ಲಿಂಗದಲ್ಲಿ ಅರ್ಪಿಸಲ್ಪಟ್ಟು ಆತ್ಮಾರ್ಪಣೆಯೂ ಕೂಡ ಆಗಿಹೋದಮೇಲೆ ಶಿವಾತಿರಿಕ್ತವಾಗಿ ಯಾವದೂ ಉಳಿಯಲಿಲ್ಲವೆಂದು ಭಾವಿಸಿ, ಪುನಃ ಪೂಜಾಕಾಲ ಪ್ರಾಪ್ತಿಯಾಗುವವರವಿಗೂ ಶಿವನೇ ನಾನು ಎಂದು ಬಾವಾಭ್ಯಾಸವನ್ನು ಮಾಡುತ್ತ ಹೋಗಲಾಗಿ ಆ ಭಾವವು ದೃಢವಾಗಲು ಉಪಾಸಕನಿಗೆ ಶಿವತ್ವ ಪ್ರಾಪ್ತಿಯಾಗುತ್ತದೆಂದು ತಾತ್ಪರ್ಯವು (ಆದ್ದರಿಂದ ಯಾವ ಯುಕ್ತಿಗೂ ಯಾವ ಶ್ರುತಿಗೂ ವಿರೋಧವಿಲ್ಲಾ. ಈ ಮಂತ್ರದಿಂದ ಆಕಾರಾದ್ಯವಚ್ಛಿನ್ನಗಳಾದ ದೇವತೆಗಳ ಉಪಾಸನೆಯು ನಿಷೇಧಮಾಡಿ ಶಿವಲಿಂಗೋಪಾಸನೆಯು ವಿಹಿತವಾಯಿತೆಂದು ತಿಳಿಯತಕ್ಕದ್ದು.||೪||

ಯಾವ ಪರಶಿವಲಿಂಗವನ್ನು ಮನಸ್ಸಿನಿಂದ ಜನವು ತಿಳಿಯುವದಿಲ್ಲವೋ? ಯಾವ ಪರಶಿವಲಿಂಗವು ಪ್ರಸಾದಲಿಂಗರೂಪವಾಗಿ ಮನಸ್ಸನ್ನು ತಿಳಿಯುವದೆಂದು ಶಿವಜ್ಞಾನಿಗಳು ಹೇಳುತರೋ ? ಅದುವೇ ಪರಬ್ರಹ್ಮವು. ಅದನ್ನೆ ನೀನು ತಿಳಿ. ಪ್ರತಿಮಾಕಾರದಿಂದ ಪರಿಚ್ಛಿನ್ನರಾದ ದೇವತೆಗಳು ಬ್ರಹ್ಮಸ್ವರೂಪರಲ್ಲಾ | ಶಿವಲಿಂಗಕ್ಕೆ ಆಕಾರವಿಲ್ಲದಿರುವದರಿಂದ ವಿಷ್ಣ್ವಾದಿ ದೇವತೆಗಳಿಗೆ ಆಕಾರ ವಿರುವದರಿಂದ ಶಿವಲಿಂಗವೇ ಬ್ರಹ್ಮವೆಂದು ಹಿಂದಣ ವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿತು. ಇದರಿಂದ ಮೂರ್ತಿ ಪೂಜೆಯೇ ಖಂಡಿಸಲ್ಪಟ್ಟಿತೆಂದು ಭ್ರಾಂತರಾಗಬಾರದು ಶಿವಲಿಂಗವೆಂಬುವದೇ ಮೂರ್ತಿ ರೂಪವಾಗಿದೆ ಪರಶಿವ ಬ್ರಹ್ಮಕ್ಕೆ ಮೂರ್ತಿ ಇಲ್ಲವೆಂದರೆ ವೀರಶೈವರಿಗೆ ಶಿವನ ಪೂಜೆಯೆ ಸಂಭವಿಸಲಿಕ್ಕಿಲ್ಲವು. ಮೂರ್ತಿಸ್ವರೂಪದಿಂದಲೇ ಮಹಾ ದೇವನಿಗೆ ಪೂಜ್ಯತ್ವ

ಮುಕ್ತಂ ಶಿವಲಿಂಗಸ್ಯಾಕಾರಾದಿ ಪರಿಚ್ಛಿನ್ನತ್ವಾಭಾವಾತ್ ವಿಷ್ಣ್ವಾದೇರಾಕಾರ ಪರಿಚ್ಛಿನ್ನತ್ವಾತ್ | ಶಿವಲಿಂಗಸ್ಯೈವ ಬ್ರಹ್ಮತ್ವ ಮುಪಾಸ್ಯತ್ವಮಿತಿ | ಅನೇನ ವ್ಯಾಖ್ಯಾನೇನ ಮೂರ್ತಿಪೂಜೈವ ಖಂಡಿತೇತಿ ನಭ್ರಮಿತವ್ಯಂ | ಶಿವಲಿಂಗಸ್ಯ ಮೂರ್ತಿರೂಪತ್ವಾತ್| ಅನ್ಯಥಾ ವೀರಶೈವಾನಾಂ ಶಿವಪೂಜೈವ ನ ಸಂಭವೇತ್| ಮೂರ್ತ್ಯಾತ್ಮನ್ಯೈವ ದೇವಸ್ಯ ಯಥಾಪೂಜ್ಯತ್ವಕಲ್ಪನಾ | ಇತ್ಯುಕ್ತತ್ವಾತ್ ಸಚ್ಚಿದಾನಂದಾತ್ಮಕ ಪರಶಿವಸ್ಯೈವ ಘೃತಕಾಠಿಣ್ಯನ್ಯಾಯೇನ ಲಿಂಗಮೂರ್ತಿರೂಪತ್ವಾತ್ | ಪ್ರತಿಮಾಕಾರ ಶೂನ್ಯಸ್ಯಲಿಂಗಸ್ಯ ಪರಮಾತ್ಮನಃ || ಇತ್ಯುಕ್ತ್ಯಾತು ಪ್ರತಿಮಾಕಾರೋನಿಷಿಧ್ಯತೇ | ,,ಯಾತೇರುದ್ರಶಿವಾತನೂ ರಘೋರಾಪಾಪಕಾಶಿನೀತಿ,, ಶ್ರುತೇಃ ನನ್ವೇವಂಚೇಚ್ಛಿವಲಿಂಗಸ್ಯಾಪಿ ಪರಿಚ್ಛಿನ್ನತ್ವಾತ್ |ಕಥಂ ತಸ್ಯ ಬ್ರಹ್ಮತ್ವಂ | ಇತಿಚೇನ್ನ | ತಸ್ಯಸರ್ವಸ್ವಾತಂತ್ರ್ಯಪ್ರಯುಕ್ತಲಿಂಗರೂಪತ್ವೇಪಿ| ನಾಬ್ರಹ್ಮತ್ವಂ | ಘೃತಸ್ಯಕಠಿಣತಾದಶಾಯಾಮಪ್ಯಘೃತತ್ವಾಭಾವಇವ ಪರಬ್ರಹ್ಮಣಃ ಶಿವಸ್ಯ ಭಕ್ತಾನುಗ್ರಹಾರ್ಥಂ ಇಷ್ಟಾದಿ ಲಿಂಗರೂಪತ್ವೇಪಿ ನಾಬ್ರಹ್ಮತ್ವಂ ವಕ್ತುಂಶಕ್ಯತೇ | ನೇದಮಿತ್ಯಾದಿನಾ ಶಿವಲಿಂಗಾತಿರಿಕ್ತ ವಿಷ್ಣ್ವಾದೀನಾಂ

---

ವೆಂದು ಶಾಸ್ತ್ರದಲ್ಲಿ ಹೇಳಿದೆ. ಆದ್ದರಿಂದ ಸಚ್ಚಿದಾನಂದ ರೂಪ ಪರಶಿವನೇ ತನ್ನ ಸ್ವಾತಂತ್ರ್ಯ ಶಕ್ತಿಯಿಂದ ಕರಗಿದ ತುಪ್ಪವು ಹೆಪ್ಪುಗಟ್ಟಿದಂತೆ ಲಿಂಗಮೂರ್ತಿ ಸ್ವರೂಪನಾಗಿರುವನು. ಎಲೈ ಶಿವನೆ ನಿನ್ನ ಮಂಗಲಮಯವಾದ ಯಾವ ಲಿಂಗಮೂರ್ತಿಯು ಭಕ್ತರುಗಳಲ್ಲಿ ಪ್ರಕಾಶಿಸುವಂಥಾದ್ದಾಗಿದೆಯೊ? ಎಂದು ಯಜುರ್ವೇದವು ಹೇಳುತ್ತದೆ ಆದ್ದರಿಂದ ಆ ಪರಶಿವನು ಲಿಂಗಮೂರ್ತಿ ಸ್ವರೂಪನಾಗಿದ್ದರೂ ಅವನ ಲಿಂಗಮೂರ್ತಿಗೂಕೂಡಾ ಬ್ರಹ್ಮತನವು ಸಿದ್ಧಿಸುತ್ತದೆ ಘೃತಕ್ಕೆ ಕಠಿಣತ್ವಾವಸ್ಥೆಯು ಪ್ರಾಪ್ತವಾದಾಗ್ಯೂ ಕಠಿಣವಾದ ಆ ತುಪ್ಪಕ್ಕೆ ಘೃತತ್ವವೇ ಇರುವಂತೆ ಬ್ರಹ್ಮವು ತನ್ನ ಸ್ವಾತಂತ್ರ್ಯಶಕ್ತಿಯಿಂದ ಇಷ್ಟಾದಿ ಲಿಂಗಸ್ವರೂಪವಾದಾಗ್ಯೂ | ಆ ಇಷ್ಟಲಿಂಗಾದಿಗಳಿಗೆ ಬ್ರಹ್ಮತ್ವವು ಸಿದ್ಧವಾಗುತ್ತದೆ. ಹಾಗಾದರೆ 'ನೇದಂ' ಎಂಬುವದರಿಂದ ಯಾವದೂ ಬ್ರಹ್ಮವಲ್ಲ ಎಂದು ಶ್ರುತಿಯು ಹೇಳುತ್ತದೆ. ಅಂದರೆ ಶಂಖಚಕ್ರ ಗದಾ ತ್ರಿಶೂಲಾದಿ ಧಾರಣೆಯುಳ್ಳ ಯಾವ ದೇವತೆಗಳೂ ಬ್ರಹ್ಮವಲ್ಲ. ಆದ್ದರಿಂದ ಆ ದೇವತೆಗಳು ಉಪಾಸ್ಯರಲ್ಲ ಎಂದು ಶ್ರುತಿಯ ತಾತ್ಪರ್ಯವು. ಹೀಗೆ ಹೇಳದೆ ಶಿವಲಿಂಗವನ್ನು ಕೂಡಾ ನಿಷೇಧ್ಯ ಕೋಟಿಯಲ್ಲಿ ಸೇರಿಸಿದರೆ ಇದೇ ಉಪನಿಷತ್ತಿನಲ್ಲಿ ದೇವತೆಗಳ ಮುಂಭಾಗದಲ್ಲಿ ಪ್ರಾದುರ್ಭೂತವಾದ ಯಕ್ಷವೆಂಬ ಜ್ಯೋತಿರ್ಲಿಂಗಕ್ಕೆ ಬ್ರಹ್ಮವೆಂದು ಹೇಳಿದ ಪಾರ್ವತೀ ದೇವಿಯ ವಾಕ್ಯದಿಂದ ಅದರಲ್ಲಿ ದೇವತೆಗಳಿಗೆ ಬ್ರಹ್ಮತ್ವ ನಿಶ್ಚಯವಾಗದೇ ಹೋದೀತು? ಆದಕಾರಣ ಶಿವಲಿಂಗಕ್ಕೆ ಬ್ರಹ್ಮತ್ವವನ್ನೂ ಉಪಾಸ್ಯತ್ವವನ್ನೂ ಅವಶ್ಯಕವಾಗಿ ಸ್ವೀಕರಿಸತಕ್ಕದ್ದು. ಶ್ರುತಿಸಮ್ಮತವು. ತ್ರಿಶೂಲ ಚಂದ್ರಕಲಾಧಾರಿಯಾದ ಪರಮಾತ್ಮಲೀಲಾ ವಿಗ್ರಹಕ್ಕೆ ಬ್ರಹ್ಮತ್ವವೂ ಇಲ್ಲವು. ಉಪಾಸ್ಯತ್ವವೂ ಇಲ್ಲವು. ಅದು ವೀರಶೈವನಿಗೆ

ಶಂಖಚಕ್ರ ತ್ರಿಶೂಲಾದಿಧಾರಿಣಾಮಬ್ರಹ್ಮತ್ವಮನುಪಾಸ್ಯತ್ವಂಚೋಕ್ತಂ | ನತು ಶಿವಲಿಂಗಸ್ಯ, ಅನ್ಯಥಾ ಅತ್ರೈವೋಪನಿಷದಿ, ಪ್ರಾದುರ್ಭೂತಯಕ್ಷಸ್ಯ ಲಿಂಗ ರೂಪಸ್ಯ ಸಾಬ್ರಹ್ಮೇತಿಹೋವಾಚೇತ್ಯುಮಾ ವಾಕ್ಯಾದ್ಬ್ರಹ್ಮತ್ವನಿಶ್ಚಯೋನಸ್ಯಾ ದ್ದೇವಾನಾಂ ಇತಿ. ತಸ್ಯ ಶಿವಲಿಂಗಸ್ಯ ಬ್ರಹ್ಮತ್ವೋಪಾಸ್ಯತ್ವ ಪ್ರತಿಪಾದಕ ವಾಕ್ಯಾನಾ ಮನಂತತ್ವಾಚ್ಚ, ನನು ಚಂದ್ರಕಲಾದಿಧಾರಿಣಃ ಪ್ರತಿಮಾಕಾರವಿಶಿ ಷ್ಟಸ್ಯ "ಶುದ್ಧಮುಕ್ತಾಫಲಾಭಾಸಮುಪಾಸ್ಯಂ ಗುಣಮೂರ್ತಿಭಿಃ" ಇತಿ ಉಪಾ ಸ್ಯತ್ವೋಕ್ತತ್ವಾತ್. ಕಥಂ ತಸ್ಯಘೋರಮೂರ್ತೇರನುಪಾಸ್ಯತ್ವಂತ್ವಯೋಚ್ಯತೇ| 'ಇತಿಚೇದುಚ್ಯತೇ' ಗುಣಮೂರ್ತಿ ಬ್ರಹ್ಮಾದ್ಯುಪಾಸ್ಯತ್ವೋಕ್ತಾವಪಿ ನಹಿಕರ್ಮ ಭೂಮೌ ತದ್ವಿಷಯಕ ವೀರಶೈವೋಪಾಸನಾವಿಧೀಯತೇ | ಸ್ವಕೀಯಾಧೋ ಮಾ ಯಾಶಕ್ತಿಪರಿಕಲ್ಪಿತ ಚಂದ್ರಕಲಾದಿ ವಿಶಿಷ್ಟ ಶರೀರವತ್ವಾದತಏವ ಸಂಸಾರಪರಿ ಭ್ರಮಣವತ್ವಾಚ್ಚ | ಮುಮುಕ್ಷುಭಿಸ್ತತ್ಸ್ವರೂಪಸ್ಯಾನುಪಾಸ್ಯತ್ವಾತ್ | ಸ್ವ ಯಂಬದ್ಧಃ ಕಥಮನ್ಯಾನ್ಮೋಚಯೇತ್, | ಪಾಷಾಣಾವಲಂಬಿನಾಂ ಸಮುದ್ರೇ ನಿಮಜ್ಜನಮಿವ ನೀಲಕಂಠ ತ್ರಿಲೋಚನ ಚಂದ್ರಾರ್ಧಶೇಖರ ಸ್ವರೂಪಾವಲಂಬಿ ನಾಂ ಸಂಸೃತ್ಯಬ್ಧ್ಯುಲ್ಲಂಘನಂನಸ್ಯಾತ್ | ತದುಕ್ತಂ | ಅಶರೀರೋಪಿ ಸರ್ವತ್ರ

---

ಉಪಾಸ್ಯನಲ್ಲ. ಹಾಗಾದರೆ ಈ ಮೂರ್ತಿಗೆ "ಉಪಾಸ್ಯಂ ಗುಣಮೂರ್ತಿಭಿಃ" ಎಂದು ಸಿದ್ಧಾಂತ ಶಿಖಾಮಣಿಯು ಚಂದ್ರಕಲಾಧಾರಿಯಾದ ಘೋರಮೂರ್ತಿಗೆ ಉಪಾಸ್ಯತ್ವವನ್ನು ಏಕೆ ಹೇಳುತ್ತದೆಯೆಂದರೆ ಗುಣಮೂರ್ತಿಗಳಾದ ಬ್ರಹ್ಮಾದಿಗಳಿಂದ ಅದು ಉಪಾಸ್ಯವಾದರೂ ಈ ಕರ್ಮಭೂಮಿಯಲ್ಲಿ ಮೂರ್ತಿ ವಿಷಯಕವಾದ ಉಪಾಸನೆಯು ವೀರಶೈವರಿಗೆ ವಿಧಿಸಲ್ಪ ಡುವದಿಲ್ಲಾದ್ದರಿಂದಲೇ ಚಂದ್ರಕಲಾದಿ ವಿಶಿಷ್ಟ ಘೋರಮೂರ್ತಿಯು ಆ ಪರಮಾತ್ಮನ ಅಧೋ ಮಾಯಾಶಕ್ತಿಯಿಂದ ಪರಿಕಲ್ಪಿತವಾದಕಾರಣ, ಸಂಸಾರದಲ್ಲಿ ಬಿದ್ದಿರುವದು. ಆದಕಾರಣ ಮು ಮುಕ್ಷುಗಳಿಗೆ ಉಪಾಸ್ಯವಲ್ಲ. ತಾನೇ ಬದ್ಧನಾದಮೇಲೆ ಅನ್ಯರನ್ನು ಬಿಡುಗಡೆ ಮಾಡಿಸುವ ಬಗೆ ಹೇಗೆ? ಅಂಥ ಘೋರಮೂರ್ತಿಯನ್ನಾಶ್ರಯಿಸಿದರೆ ಕಲ್ಲನ್ನು ಹಿಡಿದುಕೊಂಡ ಮನುಷ್ಯನು ಸಮುದ್ರದಲ್ಲಿ ಮುಳುಗಿಹೋಗುವಂತೆ ಸಂಸಾರ ಸಮುದ್ರವನ್ನು ಎಂದಿಗೂ ದಾಂಟಲಾರನು. ಆದ್ದರಿಂದಲೇ ಶ್ರೀ ಭಗವತ್ಪಾದ ರೇಣುಕ ಶಿವಾಚಾರ್ಯರು "ಅಶರೀರೋಪಿ ಸರ್ವತ್ರ ವ್ಯಾಪ ಕೋಪಿ ನಿರಂಜನಃ | ಆತ್ಮಾಮಾಯಾ ಶರೀರಸ್ಥಃ ಪರಿಭ್ರಮತಿ ಸಂಸೃತೌ" ಈ ಶ್ಲೋಕದ ಪದ, ವಾಕ್ಯ ಪ್ರಮಾಣಗಳನ್ನು ಬಲ್ಲ ಶ್ರೀ ಮರಿತೋಂಟದಾರ್ಯರು ವ್ಯಾಖ್ಯಾನಮಾಡಿರುವರೇ ನಂದರೆ 'ಪರಮುಕ್ತಿಗೂ ಅಪರ ಮುಕ್ತಿಗೂ ಕಾರಣವಾದ ಶುದ್ಧವಿದ್ಯಾ ಸ್ವರೂಪವಾದ ಶರೀರ ವುಳ್ಳವನಾದರೂ ಶರೀರವಿಲ್ಲದವನಾಗಿಯೂ, ಅಪರಿಚ್ಛಿನ್ನನಾದ ಕಾರಣ ವ್ಯಾಪಕನಾಗಿಯೂ ದೋಷರಹಿತನಾದಕಾರಣ ನಿರಂಜನನಾಗಿಯೂ, ಪರಶಿವನು ಕಳೆ ಮೊದಲುಗೊಂಡು ಕ್ಷಿತಿಪರಿಯಂ

ವ್ಯಾಪಕೋಪಿ ನಿರಂಜನಃ | ಆತ್ಮಾ ಮಾಯಾಶರೀರಸ್ಥಃ ಪರಿಭ್ರಮತಿಸಂಸೃತೌ ||
ವ್ಯಾಖ್ಯಾತಂ ಚೈತತ್ಸರ್ವಂಪದವಾಕ್ಯಪ್ರಮಾಣಜ್ಞೇನ ಶ್ರೀಮದುರತೋಂಟದಾ
ರ್ಯೇಣ | ಪರಾಪರಮೋಕ್ಷಕಾರಣೀಭೂತ ಶುದ್ಧವಿದ್ಯಾ ಶರೀರವತ್ತ್ವೇನಾ
ಶರೀರೋಪಿ | ಅಪರಿಚ್ಛಿನ್ನತ್ವಾ ದ್ವ್ಯಾಪಕೋಪಿ | ದೋಷರಹಿತತ್ವಾನ್ನಿರಂಜ
ನೋಪಿ ಕಲಾದಿ ಕ್ಷಿತಿಪರ್ಯಂತ ತ್ರಿಂಶತ್ತತ್ತ್ವಕಾರಣೀಭೂತ ಸ್ವಕೀಯಾಧೋಮಾ
ಯಾಶಕ್ತಿ ಪರಿಕಲ್ಪಿತ ಚಂದ್ರಕಲಾದಿವಿಶಿಷ್ಟ ಶರೀರವಾನ್ಸನ್ ಸಂಸಾರೇ ಪರಿಭ್ರಮ
ತೀತ್ಯರ್ಥಃ || ಯದ್ಯಪಿ ತತ್ರತತ್ರ ನೀಲಕಂಠತ್ರಿಲೋಚನತ್ವಾದಿ ವಿಷಯರೂ
ಪೋಪಾಸನಂ ಚೋಕ್ತಂ | ಉಪನಿಷದ್ಯಪಿ| ಹೃತ್ಪುಂಡರೀಕಂ ವಿರಜಂ ವಿಶುದ್ಧ
ಮಿತ್ಯುಪಕ್ರಮ್ಯ ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀ
ಲಕಂಠಂ ಪ್ರಶಾಂತಂ | ಇತ್ಯಂತೇನ ಚಿಜ್ಜ್ಯೋತೀರೂಪಾಂತರ್ಲಿಂಗಸ್ಯಾಪಿ
ತ್ರಿಲೋಚನತ್ವಾದಿಕಮುಕ್ತಂ| ತಥಾಪಿ ತತ್ಸ್ವರೂಪಂ ನ ಸ್ವಾಭಾವಿಕಂ. ಕಿಂತು
ಮಾಯಿಯಾಂ. ನಿಷ್ಕಲಂ ನಿರಾಕಾರಂ ಪದಂ ಬ್ರಹ್ಮ ಶಿವಾಭಿಧಂ | ನಿಧ್ಯಾತು
ಮಸಮರ್ಥೋಪಿ ತದ್ವಿಭೂತಿಂ ವಿಭಾವಯೇತ್ || ಇತ್ಯುಕ್ತರೀತ್ಯಾ ಸಚ್ಚಿದಾ
ನಂದ ಲಿಂಗಧ್ಯಾನಾಸಮರ್ಥೇನ ಲಿಂಗೇ ತನ್ಮಾಯಾಕಲ್ಪಿತಂ ಸ್ವರೂಪಂ ಪರಿಕ

---

ತಗಳಾದ ೩೦ ತತ್ವಗಳಿಗೆ ಕಾರಣವಾದ ತನ್ನ ಅಧೋಮಾಯಾಶಕ್ತಿಯಿಂದ ಪರಿಕಲ್ಪಿತಮಪ್ಪ ಚಂ
ದ್ರಕಲಾದಿ ವಿಶಿಷ್ಟ ಶರೀರವುಳ್ಳವನಾಗಿ ಸಂಸಾರದಲ್ಲಿ ಭ್ರಮಿಸುತ್ತಾನೆ. ಎಂದು ಅರ್ಥವನ್ನು
ಬರೆದಿರುವರು. ಹಾಗಾದರೆ ಬೇರೆ ಬೇರೆ ಕಡೆಯಲ್ಲಿ ನೀಲಕಂಠ ತ್ರಿಲೋಚನ ಚಂದ್ರಕಲಾದಿ
ವಿಶಿಷ್ಟ ಮೂರ್ತಿಯ ಉಪಾಸನೆಯು ಹೇಳಲ್ಪಟ್ಟದೆಯಲ್ಲಾ ! ಮತ್ತು ಹೃತ್ಪುಂಡರೀಕಂ ವಿರಜಂ
ವಿಶುದ್ಧಂ ಎಂದು ಉಪಕ್ರಮಿಸಿ | ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ
ನೀಲಕಂಠಂ ಪ್ರಶಾಂತಂ | ಎಂಬುವ ಪರಿಯಂತರವಿರುವ ಉಪನಿಷತ್ತಿನ ವಾಕ್ಯಗಳಿಂದಲೂ ಅಂ
ತರ್ಲಿಂಗಕ್ಕೆ ತ್ರಿಲೋಚನ ಚಂದ್ರಕಲಾ ಧಾರಣ ಮೊದಲಾದ ಘೋರಮೂರ್ತಿಯ ಸ್ವರೂಪವು
ಹೇಳಲ್ಪಟ್ಟದೆ ಆದರೂ ವೀರಶೈವೋತ್ತಮಾಧಿಕಾರಿಗೆ ಹೇಳಿದ ಮಾತಲ್ಲಾ. ಮತ್ತು ಆ ನೀಲಕಂ
ಠತ್ವಾದಿ ಸ್ವರೂಪವು ಸ್ವಾಭಾವಿಕವೂ ಅಲ್ಲಾ. ಅಧೋಮಾಯಾಕಲ್ಪಿತವಾದದ್ದು 'ಆದ್ದರಿಂದಲೇ
ರೇಣುಕ ಭಗವತ್ಪಾದರು "ನಿಷ್ಕಲಂಕಂ ನಿರಾಕಾರಂ ಪರಂ ಬ್ರಹ್ಮ ಶಿವಾಭಿಧಂ" ನಿಧ್ಯಾತುಮ
ಸಮರ್ಥೋಪಿತದ್ವಿಭೂತಿಂ ವಿಭಾವಯೇತ್ "ಅಂದರೆ ನಿಷ್ಕಲಂಕನೂ, ನಿರಾಕಾರನೂ ಆದ
ಶಿವನಾಮಕ ಪರಬ್ರಹ್ಮ ವಸ್ತುವನ್ನು ಧ್ಯಾನಮಾಡಲು ಸಮರ್ಥನಾದವನು. ಆ ಶಿವನ ಚಂದ್ರಕ
ಲಾದಿ ವಿಶಿಷ್ಟಮೂರ್ತಿ ಸ್ವರೂಪವನ್ನು ಲಿಂಗದಲ್ಲಿ ಕಲ್ಪಿಸಿ ಉಪಾಸನೆಮಾಡಬೇಕೆಂದು ಹೇಳಿ
ದ್ದಾರೆ. ಇದೇ ತಾತ್ಪರ್ಯದಿಂದಲೇ "ಹೃತ್ಪುಂಡರೀಕಂ "ಎಂಬುವ ಶ್ರುತಿಯು ನೀಲಕಂಠತ್ವ
ತ್ರಿಲೋಚನತ್ವಾದಿ ವಿಶೇಷಗಳನ್ನು ಹೇಳಿದೆ ' ಅಲ್ಲದೆ ತ್ರಿಲೋಚನತ್ವಾದಿ ಮಾಯಿಕ ಧರ್ಮಗಳ

ಲ್ಪ್ಯ | ಉಪಾಸನೀಯಮಿತಿ ಶ್ರುತೇಸ್ತಾತ್ಪರ್ಯಂ | ಅನ್ಯಥಾಸದ್ರೂಪಂ ಭಾವ ಲಿಂಗಂಸ್ಯಾತ್ | ಚಿದ್ರೂಪಂ ಪ್ರಾಣಲಿಂಗಕಂ | ಆಸಂದರೂಪಮಾಚಾರ್ಯೈರಿಷ್ಟಲಿಂಗಮುದಾಹೃತಂ || ಇತ್ಯನುಭವಸೂತ್ರಾದ್ಯುಕ್ತಂವಿರುಧ್ಯೇತ ||೫||

ಮೂ|| ಯಚ್ಚಕ್ಷುಷಾ ನಪಶ್ಯತಿ ಯೇನಚಕ್ಷೂಂಷಿಪಶ್ಯತಿ।
ತದೇವಬ್ರಹ್ಮತ್ವಂ ವಿದ್ಧಿನೇದಂ ಯದಿದಮುಪಾಸತೇ ||೬||

ಶಾಂ|| ಯತ್ ಪರಶಿವಲಿಂಗಂ ಚಕ್ಷುಷಾ ಚಕ್ಷುರಿಂದ್ರಿಯೇಣ ನಪಶ್ಯತಿ ನಾವಲೋಕಯತಿಜನಃ | ಯೇನ ಶಿವಲಿಂಗರೂಪೇಣ | ಚಕ್ಷೂಂಷಿ | ಚಕ್ಷುರಿಂದ್ರಿಯಂ| ಬಹುವಚನಂ ಛಾಂದಸಂ | ಪಶ್ಯತಿ, ರೂಪಗ್ರಾಹಕಂ ಭವತಿ | ತದೇವೇತ್ಯಾದಿಕಂ ಪೂರ್ವಮುಕ್ತಾರ್ಥಂ || ಏತೇನ ಚಕ್ಷುಃ ಕ ಉ ದೇವೋಯುನಕ್ತೀತ್ಯಸ್ಯೋತ್ತರಮುಕ್ತಂ ||೬||

ಮೂ|| ಯಚ್ಛ್ರೋತ್ರೇಣನಶೃಣೋತಿ ಯೇನಶ್ರೋತ್ರಮಿದಂಸ್ಮೃತಂ । ತದೇವ ಬ್ರಹ್ಮತ್ವಂ ವಿದ್ಧಿನೇದಂ ಯದಿದಮುಪಾಸತೇ ||೭||

ಶಾಂ|| ಯತ್ಪರಶಿವಲಿಂಗಂ ಶ್ರೋತ್ರೇಣ ಶ್ರೋತ್ರೇಂದ್ರಿಯೇಣ, ನಶೃಣೋತಿಜನಃ | ತಸ್ಯ ಶ್ರಾವಣಪ್ರತ್ಯಕ್ಷ ವಿಷಯಂ ಭವತೀತ್ಯರ್ಥಃ. ಯೇನಪ್ರಸಾ

---

ನ್ನು ವಾಸ್ತವವಾಗಿ ಪ್ರಾಣಲಿಂಗಕ್ಕೆ ಮಾನಿಸಿದರೆ "ಚಿದ್ರೂಪಂ ಪ್ರಾಣಲಿಂಗಕಂ ಅಂದರೆ ಪ್ರಾಣಲಿಂಗವು ಚಿದ್ರೂಪವಾದದ್ದು ಎಂದು ಹೇಳುವ ಅನುಭವಸೂತ್ರಕ್ಕೆ ವಿರೋಧವಾಗುವದು. " ಚಂದ್ರಕಲಾದಿ ವಿಶಿಷ್ಟರೂಪವು ಸಂಸಾರ ಬದ್ಧವಾದದ್ದು ಆದರೂ ಸ್ಥೂಲಾರುಂಧತೀನ್ಯಾಯದಂತೆ ಕನಿಷ್ಠಾಧಿಕಾರಿಗೆ ಕಿಂಚಿದುಪಯುಕ್ತವಾಗುವದು. ||೫||

ಯಾವ ಪರಶಿವಲಿಂಗವನ್ನು ಜನವು ಚಕ್ಷುರಿಂದ್ರಿಯದಿಂದ ನೋಡುವದಿಲ್ಲವೊ ? ಮತ್ತು ಯಾವ ಪರಶಿವಲಿಂಗದ ಅಂಶರೂಪವಾದ ಶಿವಲಿಂಗದಿಂದ ಚಕ್ಷುರಿಂದ್ರಿಯವು ರೂಪವನ್ನು ಗ್ರಹಿಸಲು ಸಮರ್ಥವಾಗುವದೊ ? ಅದುವೇ ಬ್ರಹ್ಮವು. ಅದುವೇ ಉಪಾಸ್ಯವು. ಉಳಿದ ಪದಗಳ ಅರ್ಥವನ್ನು ಹಿಂದೆ ಹೇಳಲ್ಪಟ್ಟ ಪ್ರಕಾರ ತಿಳಿಯತಕ್ಕದ್ದು. ||೬||

ಯಾವ ಪರಶಿವಲಿಂಗವು ಶ್ರವಣೇಂದ್ರಿಯದಿಂದುಂಟಾದ ಪ್ರತ್ಯಕ್ಷಕ್ಕೆ ವಿಷಯವಾಗುವದಿಲ್ಲವೊ? ಯಾವ ಪರಶಿವಲಿಂಗವು ಪ್ರಸಾದಲಿಂಗರೂಪದಿಂದ ಶ್ರವಣೇಂದ್ರಿಯಕ್ಕೆ ಶಬ್ದಗ್ರಹಣ ಸಾಮ

ದಲಿಂಗರೂಪೇಣ, ಇದಂ ಕರ್ಣಶಷ್ಕುಲ್ಯವಚ್ಛಿನ್ನಂ ಶ್ರೋತ್ರಂ. ಶ್ರೋತ್ರೇಂದ್ರಿಯಂಶ್ರುತಂ ಶಬ್ದಗ್ರಹಣಸಮರ್ಥಂ ಭವತಿ| ತದೇವೇತ್ಯಾದಿಕಂ ಪೂರ್ವಮುಕ್ತಾರ್ಥಂ ಏತೇನಶ್ರೋತ್ರಂ ಕ ಉದೇವ್ರೋಯುನಕ್ತೀತ್ಯಸ್ಯ ಪ್ರತಿವಚನಮುಕ್ತಂ ||

ಮೂ|| ಯತ್ಪ್ರಾಣೇನ ನಪ್ರಾಣಿತಿ ಯೇನಪ್ರಾಣಃಪ್ರಣೀಯತೇ । ತದೇವಬ್ರಹ್ಮತ್ವಂವಿದ್ಧಿ ನೇದಂ ಯದಿದಮುಪಾಸತೇ ||೮||

## ಇತಿ ಪ್ರಥಮಖಂಡಃ,

ಯತ್ಪರಶಿವಲಿಂಗಂ ಪ್ರಾಣೇನ ನಪ್ರಾಣಿತಿ ನಪ್ರಾಣನಂಕರೋತಿ | ಯೇನಪ್ರಾಣಲಿಂಗರೂಪೇಣ ಪ್ರಾಣಃ ಪ್ರಾಣಾಪಾನಾದಿ ಪಂಚವೃತ್ತಿರೂಪಃ | ಶರೀರಧಾರಣರೂಪ ಸ್ವವ್ಯಾಪಾರಂ ವಿಧಧಾತಿ. ತದೇವೇತ್ಯಾದಿಕಂ ಪೂರ್ವವತ್ ಬೋಧ್ಯಂ|| ಪ್ರಾಣಏವಮನುಷ್ಯಾಣಾಂ ದೇಹಧಾರಣಕಾರಣಂ ಇತ್ಯುಕ್ತೇಃ || ತದಾಧಾರಃ ಶಿವಃ ಪ್ರೋಕ್ತಃ ಸರ್ವಕಾರಣಕಾರಣಂ | ನಿರಾಧಾರಃ ಶಿವಃ

---

ರ್ಥ್ಯವನ್ನುಂಟುಮಾಡುತ್ತದೆಯೊ ? ಅದುವೆ ಪರಬ್ರಹ್ಮವು | ಅದನ್ನೇ ಉಪಾಸನೆಮಾಡಬೇಕು. ಈ ಮಂತ್ರದಿಂದ ಶ್ರೋತ್ರಕ್ಕೆ ಪ್ರೇರಕವಾವದು ? ಎಂಬ ಪ್ರಶ್ನಕ್ಕೆ ಉತ್ತರವು ಹೇಳಲ್ಪಟ್ಟಿತು. ಅಂದರೆ ಯಾವ ಪರಶಿವಲಿಂಗವು ಪ್ರಸಾದಲಿಂಗರೂಪದಿಂದ ಪ್ರೇರಿಸುತ್ತದೆಯೊ | ಆ ಪರಶಿವಲಿಂಗವು ಪರಂಪರಾ ಪ್ರೇರಕವು, ಪ್ರಸಾದಲಿಂಗವು ಸಾಕ್ಷಾತ್ ಪ್ರೇರಕವಾಗುತ್ತದೆಂಬದನ್ನು ತಿಳಿಯತಕ್ಕದ್ದು? ||೭||

ಯಾವ ಪರಶಿವಲಿಂಗವು ಪ್ರಾಣದಿಂದ ಜೀವಿಸಿಕೊಂಡಿರದೆ ಪ್ರಾಣವು ಮಾತ್ರ ಯಾವ ಪರಶಿವಲಿಂಗದ ಅಂಶರೂಪವಾದ ಪ್ರಾಣಲಿಂಗದಿಂದ ತನ್ನ ಶರೀರಧಾರಣ ವ್ಯಾಪಾರದಲ್ಲಿ ಸಮರ್ಥನಾಗುತ್ತದೆಯೊ ? ಆ ಪರಶಿವ ಲಿಂಗವೇ ಬ್ರಹ್ಮವೆಂದು ತಿಳಿದು ನೀನು ಉಪಾಸನೆಯನ್ನು ಮಾಡು ಇತರ ದೇವತೆಗಳನ್ನು ಉಪಾಸನೆಯಂ ಮಾಡಬೇಡ. ||೮||

ಈ ಉಪನಿಷತ್ತಿನಲ್ಲಿ ಪ್ರಥಮ, ದ್ವಿತೀಯ ಮಂತ್ರಗಳ ಪ್ರಶ್ನೋತ್ತರ ವಾಕ್ಯಗಳಿಂದ ಪ್ರೇರಣೆಮಾಡುವವನಲ್ಲಿ ಒಂದಾನೊಂದು ಶಕ್ತಿವಿಶೇಷವನ್ನು ಸ್ವೀಕರಿಸದಿದ್ದರೆ ಅಶಕ್ತಃ ಕಿಂಕರಿಷ್ಯತಿ | ಎಂಬುಕ್ತಿಯಂತೆ ಶಕ್ತಿ ಶೂನ್ಯನಾದವನು. ಯಾವುದನ್ನೂ ಪ್ರೇರಿಸಲಾರನು ಆದುದರಿಂದ ಪರಬ್ರಹ್ಮವು ಶಕ್ತಿಯೆಂಬ ವಿಶೇಷದಿಂದ ಕೂಡಿರುವದರಿಂದ ಸವಿಶೇಷ ಬ್ರಹ್ಮವೇ ಈ ಉಪನಿಷತ್ತಿನಿಂದ ಹೇಳಲ್ಪಟ್ಟಿರುವದೆಂದು ತಿಳಿಯತಕ್ಕದ್ದು. ಬ್ರಹ್ಮದಲ್ಲಿ ಒಂದು ವಿಚಿತ್ರಶಕ್ತಿಯನ್ನು ಅಂಗೀಕರಿಸದಿದ್ದಲ್ಲಿ. ಅದು ಶ್ರೋತ್ರಾದಿಗಳಿಗೆ ಶ್ರೋತ್ರಾದಿ ರೂಪವಾಗಿ ಸೇರಿಸುತ್ತದೆಂಬುವ ಶ್ರುತಿಯು ಸಂಗತವಾಗಲಾರದು. ಮತ್ತು ದ್ವಿತೀಯ ಮಂತ್ರದಿಂದ ಲಿಂಗಾಂಗ ಸಾಮರಸ್ಯಜ್ಞಾ

ಸಾಕ್ಷಾತ್ ಪ್ರಾಣಸ್ತೇನಪ್ರತಿಷ್ಠಿತ, ಇತಿ ಅತ್ರಪ್ರಥಮದ್ವಿತೀಯಮಂತ್ರಾಭ್ಯಾಂ
ತೇನೇಷಿತ ಮಿತ್ಯಾದಿ ಪ್ರಶ್ನವಾಕ್ಯಾತ್ | ಶ್ರೋತ್ರಸ್ಯಶ್ರೋತ್ರಮಿತ್ಯಾದ್ಯು
ತ್ತರವಾಕ್ಯಾಚ್ಚ | ಪ್ರೇರಯಿತರಿ ಶಕ್ತಿವಿಶೇಷಾಭಾವೇ ಪ್ರೇಷಯಿತೃತ್ವಮನುಪ
ಪನ್ನಂ | ಇತ್ಯತಸ್ತಸ್ಯಸವಿಶೇಷತ್ವಮುಕ್ತಂ | ಕಿಂಚ ದ್ವಿತೀಯಮಂತ್ರೇಣ ಸ್ವ
ಕೀಯಶಕ್ತ್ಯಾ ಶ್ರೋತ್ರಾದ್ಯವಚ್ಛಿನ್ನ ಷಡ್ಲಿಂಗಸ್ಥಲರೂಪಂ ಜಾತಂ ಸತ್ ಶ್ರೋ
ತ್ರಾದಿಕಂ ಪ್ರೇರಯತೀತ್ಯುಕ್ತಂ | ಉಕ್ತಂಚ ತಲ್ಲಿಂಗಾಂಗ ಸಾಮರಸ್ಯಜ್ಞಾನಿ
ನಾಂ ಧೀರಾಣಾಂ ಮುಕ್ತಿಪ್ರಯೋಜನಂ | ತೃತೀಯಮಂತ್ರೇಣತು ವಾಙ್ಮನಸಾ
ದ್ಯಗೋಚರತ್ವಮುಕ್ತಂ. ನತುಸಾಮಾನ್ಯತೋ ಅವಿಷಯತ್ವಂ. ಅವಾಙ್ಮನಸ
ಗೋಚರಮಿತಿ ಜ್ಞಾನಸ್ಯೈವ ವಿಷಯತ್ವಾತ್. ಯತ್ತು ನಿರ್ವಿಶೇಷಮೇವಬ್ರಹ್ಮ.
ಸ್ವಸಾನ್ನಿಧ್ಯಮಾತ್ರೇಣ ಪ್ರೇಷಯಿತೃಭವತೀತಿ ಪ್ರೇಷಕಪ್ರಶ್ನಸ್ಯೋಪಪನ್ನತ್ವಾ
ತ್. ನಿರ್ವಿಶೇಷಸ್ಯ ಮುಮುಕ್ಷುಜಿಜ್ಞಾಸ್ಯತ್ವಂಯುಕ್ತಮಿತ್ಯಾಹುಃ. ತತ್ತುಚ್ಛಂ|
ಅತ್ರತದ್ಬೋಧಕಸ್ಯಕಸ್ಯಚಿತ್ಪದಸ್ಯಾಭಾವಾತ್. ತತ್ಸತ್ತೇಪ್ರಮಾಣಾಭಾವಾತ್ ಶ್ರು
ತೇರ್ಮಾನತ್ವೇ ತಸ್ಯಾ ಜಗದಂತಃಪಾತಿತ್ವೇನ ತತ್ಪ್ರತಿಪಾದ್ಯಬ್ರಹ್ಮಣೋಪಿ
ಮಿಥ್ಯಾತ್ವಾಪತ್ತೇಃ | ವೇದಸತ್ಯತ್ವಾಂಗೀಕಾರೇ ಅದ್ವೈತಹಾನಿಃ, ತದಸತ್ಯತ್ವೇ,

---

ನಿಗಳಾದ ಧೀರರಿಗೆ ಮುಕ್ತಿಪ್ರಯೋಜನವೂ ಕೂಡಾ ಹೇಳಲ್ಪಟ್ಟಿತು. ತೃತೀಯಮಂತ್ರದಿಂದ
ಲಾದರೂ ಪರಶಿವ ಬ್ರಹ್ಮವು ವಾಕ್ಕುಮನಸುಗಳಿಗೆ ವಿಷಯವಲ್ಲವೆಂದು ಹೇಳಲ್ಪಟ್ಟಿತೇ ಹೊರತು
ಸಾಮಾನ್ಯವಾಗಿ ಬ್ರಹ್ಮವು ವಿಷಯವೇ ಅಲ್ಲವೆಂದು ಹೇಳಲ್ಪಡಲಿಲ್ಲಾ. ಯಾಕೆಂದರೆ ಬ್ರಹ್ಮವು
ವಾಙ್ಮನಸ್ಸುಗಳಿಗೆ ಗೋಚರವಲ್ಲವೆಂದು ಹೇಳುವವರೂ॥ ಬ್ರಹ್ಮ ಅವಾಙ್ಮಾನಸಗೋಚರಂ |
ಎಂಬ ಜ್ಞಾನಕ್ಕೆ ಆದರೂ ಬ್ರಹ್ಮವು ವಿಷಯವಾಗುತ್ತದೆಂದು ಒಪ್ಪಬೇಕಷ್ಟೆ? ಕೆಲವರು ಅಗ್ನಿ
ಯ ಸಾನ್ನಿಧ್ಯದಿಂದ ಅಯಃಪಿಂಡದಲ್ಲಿ (ಕಬ್ಬಿಣದಲ್ಲಿ) ಸುಡುವತನವು ಬರುವಂತೆ ಸ್ವತಃ ಬ್ರ
ಹ್ಮದಲ್ಲಿ ಪ್ರೇರಿಸುವ ತನವಿಲ್ಲದಿದ್ದರೂ ಮಾಯಾಸಾನ್ನಿಧ್ಯದಿಂದ ಬ್ರಹ್ಮದಲ್ಲಿ ಪ್ರೇರಣೆಮಾಡುವ
ತನವು ಬರುತ್ತದೆ ಆದ್ದರಿಂದ ಪ್ರೇರಕನಾವನೆಂಬ ಪ್ರಶ್ನವು ಸಂಗತವೇ ಆಗುತ್ತದಾದ್ದರಿಂದ
ಬ್ರಹ್ಮವು ನಿರ್ವಿಶೇಷವೇ ಆಗಿದೆ. ಆ ನಿರ್ವಿಶೇಷ ಬ್ರಹ್ಮವೆ ಮುಮುಕ್ಷುಗಳ ಜಿಜ್ಞಾಸೆಗೆ ಯೋಗ್ಯ
ವಾದದ್ದೆಂದು ಉಪನಿಷತ್ತಿನ ತಾತ್ಪರ್ಯವೆಂದು ಹೇಳುವರು. ಹೀಗೆ ಮನಸ್ಸಿಗೆ ಬಂದಂತೆ ಕ
ಲ್ಪನೆ ಮಾಡುವದು ಯೋಗ್ಯವಲ್ಲಾ? ಈ ಉಪನಿಷತ್ತಿನಲ್ಲಿ ಯಲ್ಲಿಯೂ ನಿರ್ವಿಶೇಷ ಬ್ರಹ್ಮ
ಬೋಧಕ ಶಬ್ದಗಳೇ ಇಲ್ಲದುದರಿಂದ ಆ ನಿರ್ವಿಶೇಷ ಬ್ರಹ್ಮವು ಉಪನಿಷತ್ಪ್ರತಿಪಾದ್ಯವಾಗಿದೆ
ಎಂಬುವಲ್ಲಿ ಪ್ರಮಾಣವೇ ಇಲ್ಲವು. ಶ್ರುತಿಯೇ ಪ್ರಮಾಣವೆಂದರೆ ಆ ಶ್ರುತಿಯೂ ಕೂಡಾ ಮಿ
ಥ್ಯಾಭೂತವಾದ ಜಗತ್ತಿನೊಳಗಾದುದೆಂದು ಹೇಳಬೇಕಾಗಿರುವುದರಿಂದ ಶ್ರುತಿಯೂ ಕೂಡಾ
ಮಿಥ್ಯಾಭೂತವೇ ಆಯಿತು. ಇಂಥ ಶ್ರುತಿಯಿಂದ ಬ್ರಹ್ಮವು ಪ್ರತಿಪಾದಿಸಲ್ಪಡುತ್ತದೆಂದರೆ ಆ

ಬತ್ಮಸತ್ವೆ ಸತ್ಪ್ರಮಾಣಾಂತರಾಭಾವಾತ್, ವಂಧ್ಯಾಪುತ್ರವತ್ ಬ್ರಹ್ಮಣೋಪಿ
ಮಿಥ್ಯಾತ್ವಂ ಸ್ಯಾತ್, ನಚಸಾನ್ನಿಧ್ಯಮಾತ್ರೇಣ ಪ್ರೇರಯಿತೃತ್ವಂಸಂಭವತಿ |
ಬ್ರಹ್ಮಾತಿರಿಕ್ತಸ್ಯಾಭಾವಾತ್. ತತ್ಸಾನ್ನಿಧ್ಯಸ್ಯೈವಾ ಸಂಭವಾತ್, ಸ್ವಗತಸ
ಜಾತೀಯ ವಿಜಾತೀಯಭೇದರೂಪ ವಿಶೇಷಸ್ಯೈವಾನಂಗೀಕಾರಾತ್, ಕಿಂಚಾ
ಸ್ಯ ನಿರ್ವಿಶೇಷತ್ವೆ ಜನ್ಮಾದ್ಯಸ್ಯಯತಃ" ಇತಿ ಸೂತ್ರೋಕ್ತಬ್ರಹ್ಮಲಕ್ಷಣಮ
ಸಂಗತಂಸ್ಯಾತ್, ತಸ್ಮಾದತ್ರಸರ್ವಶಕ್ತಿಕಮೇವ ಬ್ರಹ್ಮಪ್ರಶ್ನವಿಷಯೀಭೂತಂ.
ಅತಏವ ಪ್ರತಿವಚನೆ ಶ್ರೋತ್ರಸ್ಯಶ್ರೋತ್ರಮಿತ್ಯಾದ್ಯುಕ್ತಂ ಸಂಗಚ್ಛತೆ, ಅನ್ಯಥಾ
ಶ್ರೋತ್ರಾದಿರೂಪೇಣ ಶ್ರೋತ್ರೇಂದ್ರಿಯಾದಿ ಪ್ರೇಷಕತ್ವಂ ಶ್ರೋತಾದಿರೂಪ
ತ್ವಂಚಾಸಂಗತಂಸ್ಯಾತ್. ನಚ "ನಿರ್ಗುಣಂ" ನಿರಂಜನಂ" ನಿಷ್ಕಲಂ" ನಿಷ್ಕ್ರಿ
ಯಂಶಾಂತಂ" ಇತ್ಯಾದಿ ನಿರ್ವಿಶೇಷಪ್ರತಿಪಾದಕವಾಕ್ಯಾನಾಂ ವಿರೋಧಇತಿ
ವಾಚ್ಯಂ. ತೇಷಾಂ ಪ್ರಾಕೃತ ಹೇಯಗುಣಾದಿ ರಾಹಿತ್ಯ ವಿಷಯಕತ್ವಾತ್,
ನನು ಜ್ಞಾನಾದ್ಯಾಶ್ರಯತ್ವೆ "ಸತ್ಯಜ್ಞಾನ ಮನಂತಂ ಬ್ರಹ್ಮ" ಇತ್ಯಾದಿನಾ

---

ಬ್ರಹ್ಮಕ್ಕೂ ಮಿಥ್ಯಾತ್ವವನ್ನು ಹೇಳಬೇಕಾಗುವದಲ್ಲವೆ? ಒಂದು ನಿಕ್ಷೇಪವಿದೆ ಎಂದು ವಂಧ್ಯಾ
ಪುತ್ರನು (ಬಂಜೆಯ ಮಗನು) ನನಗೆ ಹೇಳಿದನೆಂದು ಯಾವನಾದರೂ ಹೇಳಿದರೆ ಅವನಮಾತನ್ನು
ಕೇಳಿ ಆ ನಿಕ್ಷೇಪದಲ್ಲಿ ಯಾವನಾದರೂ ವಿಶ್ವಾಸವಿಟ್ಟು ಪ್ರವರ್ತಿಸುವದನ್ನು ಎಲ್ಲಿಯಾದರೂ
ನೋಡಿರುವದುಂಟೆ? ಅಲ್ಲಿ ವಿಶ್ವಾಸವಿಟ್ಟು ಪ್ರವರ್ತಿಸುವವನಿಗೆ ಹುಚ್ಚನೆನ್ನಲಾರರೆ ? ಹ್ಯಾಗೆ
ವಂಧ್ಯಾಪುತ್ರನೂ ಮಿಥ್ಯಾಭೂತನೊ ಅವನು ಹೇಳಿದ ನಿಕ್ಷೇಪವೂ ಮಿಥ್ಯಾಭೂತವೊ? ಹಾಗೆ
ಶ್ರುತಿಯೂ ಮಿಥ್ಯೆಯೇ ಆಶ್ರುತಿಯು ಹೇಳಿದ ಬ್ರಹ್ಮವೂ ಮಿಥ್ಯಾಭೂತವೇ ಆಗುವದೆಂದು ಅವ
ರಿಗೆ ಯಾಕೆ ಹೊಳೆಯುವದಿಲ್ಲವೊ ತಿಳಿಯದು. ಶ್ರುತಿಯು ಸತ್ಯವೆಂದರೆ ತಮ್ಮ ಅದ್ವೈತ ಹಾನಿ
ಯೇ ಆಗುವದು ಶ್ರುತಿಯು ಅಸತ್ಯವೆಂದರೆ ಬ್ರಹ್ಮಕ್ಕೂ ವಂಧ್ಯಾಪುತ್ರನು ಹೇಳಿದ ನಿಕ್ಷೇಪದಂತೆ
ಮಿಥ್ಯಾತ್ವವು ಬಂದೇಬರುವದು. ಆದ್ದರಿಂದ ನಿರ್ವಿಶೇಷ ಬ್ರಹ್ಮವಿರುವದೆಂಬುವಲ್ಲಿ ಪ್ರಮಾಣವಿ
ಲ್ಲಾ. ಮತ್ತು ಅವರಮತದಲ್ಲಿ ಬ್ರಹ್ಮಾತಿರಿಕ್ತವಾಗಿ ಯಾವದೂ ಇಲ್ಲದ್ದರಿಂದ ಸಾನ್ನಿಧ್ಯವೇ ಸಂ
ಗತವಾಗುವದಿಲ್ಲ? ತನ್ನಲ್ಲಿರುವ ತನಗೆ ಸಜಾತೀಯವಾದ ತನಗೆ ವಿಜಾತೀಯವಾದ ವಸ್ತುಗಳ
ಭೇದವೆಂಬ ವಿಶೇಷವಿಲ್ಲದ್ದು ಬ್ರಹ್ಮವು ಎಂದು ಹೇಳುವವರು ಬ್ರಹ್ಮನ ಸಾನ್ನಿಧ್ಯವನ್ನು ಹೇಗೆಹೇ
ಳುತ್ತಿರಬಹುದು? ಸಾನ್ನಿಧ್ಯವು ಎರಡು ವಸ್ತುಗಳಿಲ್ಲದಿದ್ದರೆ ಆಗುವದುಂಟೆ? ಬ್ರಹ್ಮವು ನಿರ್ವಿಶೇಷ
ವಿದ್ದ ಪಕ್ಷದಲ್ಲಿ "ಜನ್ಮಾದ್ಯಸ್ಯಯತಃ! ಎಂದು ಬ್ರಹ್ಮಲಕ್ಷಣವನ್ನು ಹೇಳಿದ್ದು ಸಂಗತವಾಗಲಾರದು.
ಆದ್ದರಿಂದ ಈ ಉಪನಿಷತ್ತಿನಲ್ಲಿ ಸರ್ವಶಕ್ತಿವಿಶಿಷ್ಟಪರಬ್ರಹ್ಮವೇ ಪ್ರಶ್ನಕ್ಕೆ ವಿಷಯವಲ್ಲದೆ ನಿರ್ವಿ
ಶೇಷವಲ್ಲಾ| ಹಾಗಾದರೆ ಬ್ರಹ್ಮವು ನಿರ್ವಿಶೇಷವೆಂದು ಹೇಳುವ ನಿರ್ಗುಣಂ" ನಿಷ್ಕಲಂ" ನಿರಂ
ಜನಂ ನಿಷ್ಕ್ರಿಯಂ" ಶಾಂತಂ" ಬ್ರಹ್ಮವು ನಿರ್ವಿಶೇಷನೆಂದು ಹೇಳುವ ಈ ವಾಕ್ಯಗಳಿಗೆ ಗತಿ

ಜ್ಞಾನಸ್ವರೂಪತಾ'ತಸ್ಯಕಥಂ ಸಂಗಚ್ಛತೆ? ಇತಿಚೇನ್ನ. ಜ್ಞಾನಸ್ವರೂಪಸ್ಯೈವ ಜ್ಞಾನಾಶ್ರಯತ್ವಾತ್" ಚೈತನ್ಯಮಾತ್ಮೇತಿ" ಶಿವೇನಸೂತ್ರಿತತ್ವಾತ್, ಪ್ರಭಾಸ ತಿರಿಕ್ತಸ್ಯ ಪ್ರಭಾಕರಸ್ಯ ಪ್ರಭಾಶ್ರಯತ್ವವತ್' ಜ್ಞಾನಾನತಿರಿಕ್ತಸ್ಯ ಜ್ಞಾನಾಶ್ರಯತ್ವಮಿತ್ಯಂಗೀಕರಣೀಯತ್ವಾತ್. ಸಿದ್ಧೋಕ್ತಂಚ. ಅದೃಶ್ಯಂ ನೇತ್ರವದ್ಬ್ರಹ್ಮ ದೃಷ್ಟೃತ್ವಂಚಾಸ್ತಿನೇತ್ರವತ್ | ಇತಿ ಶ್ರುತಯಶ್ಚ ತಸ್ಯಜ್ಞಾತೃತ್ವಂ ವದಂತಿ. "ಸಐಕ್ಷತಲೋಕಾನ್ನುಸೃಜಾ" "ತದೈಕ್ಷತ" ಸೇಯಂ ದೇವತೈಕ್ಷತ" ಯಃಸರ್ವಜ್ಞಃ ಸಸರ್ವವಿತ್" ಇತಿ "ವಿಜ್ಞಾತಾರಮರೇಕೇನವಿಜಾನೀಯಾ" ದಿತಿಚ ತದುಕ್ತಂ ವಿಜ್ಞಾನಭೈರವೆ. | ಜ್ಞಾನಂಪ್ರಕಾಶಕಂಲೋಕೇ ಆತ್ಮಾಚೈವ ಪ್ರಕಾಶಕಃ. ಅನಯೋರಪೃಥಗ್ಭಾವಾತ್, ಜ್ಞಾನೇ ಜ್ಞಾನೀ ಪ್ರಕಾಶತೆ || ಉಕ್ತಂಚಾನ್ಯತ್ರ, ಪ್ರಕಾಶಮಾನಂ ನಪೃಥಕ್ಪ್ರಕಾಶಾತ್ ಸಚಪ್ರಕಾಶೋನ ಪೃಥಗ್ವಿಮರ್ಶಾತ್ | ನಾನ್ಯೋ ವಿಮರ್ಶೋಽಹಮಿತಿ ಸ್ವರೂಪಾದಹಂ ಸ್ವರೂಪೋಽಸ್ಮಿ ಚಿದೇಕರೂಪಃ || ಪ್ರಕಾಶಮಾನೆ ಪರಮಾರ್ಥಭಾನೌ ನಶ್ಯತ್ಯವಿದ್ಯಾತಿಮಿರೆನ

---

ಯೇನು? ಆ ವಾಕ್ಯಗಳು ಪ್ರಾಕೃತ ಹೇಯಗುಣಗಳನ್ನು ನಿಷೇಧಿಸುತ್ತವಲ್ಲದೆ ಕಲ್ಯಾಣಗುಣಗಳನ್ನು ನಿಷೇಧಿಸುವದಿಲ್ಲಾ. ಹಾಗಾದರೆ ಜ್ಞಾನಾದಿ ಗುಣಗಳನ್ನು ಬ್ರಹ್ಮದಲ್ಲಿ ಹೇಳಿದರೆ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬುವ ಶ್ರುತಿಯಿಂದ ಜ್ಞಾನಸ್ವರೂಪವೇ ಬ್ರಹ್ಮವಲ್ಲದೆ ಜ್ಞಾನಗುಣಕ್ಕೆ ಆಶ್ರಯವಲ್ಲೆಂದು ತಿಳಿದುಬರುತ್ತದಲ್ಲಾ? ಇದಕ್ಕೆಗತಿಯೇನು? ಅಂದರೆ ನಾವು ಬ್ರಹ್ಮವು ಜ್ಞಾನಸ್ವರೂಪವೆಂದೂ ಜ್ಞಾನಾಶ್ರಯವೆಂದೂ ಹೇಳುವದರಿಂದ ವಿರೋಧವಿಲ್ಲಾ "ಚೈತನ್ಯಮಾತ್ಮಾ" ಎಂಬ ಶಿವಸೂತ್ರವೂ ಕೂಡ ಜ್ಞಾನಸ್ವರೂಪವು, ಜ್ಞಾನಾಶ್ರಯವು ಎಂದು ಹೇಳುತ್ತದೆ. ಪ್ರಭಾಪುಂಜವೇ ಸೂರ್ಯನು. ಸೂರ್ಯನ ಪ್ರಭೆಯು ಎಂಬುವ ಪ್ರತೀತಿಯಿಂದ ಪ್ರಭಾಸ್ವರೂಪನಾದ ಸೂರ್ಯನಿಗೆ ಪ್ರಭಾಶ್ರಯತ್ವವು ಸಿದ್ಧಿಸುವಂತೆ ಜ್ಞಾನಕ್ಕೆ ಅಭಿನ್ನನಾದ ಪರಶಿವನಲ್ಲಿ ಜ್ಞಾನಾಶ್ರಯತನವು ಸಿದ್ಧಿಸುತ್ತದೆ. ಆದಕಾರಣ ಯಾವ ಶ್ರುತಿಗೂ ವಿರೋಧವಿಲ್ಲಾ. ಈ ವಿಷಯದಲ್ಲಿ ಬ್ರಹ್ಮವು ನೇತ್ರದಂತೆ ಅದೃಶ್ಯವಾಗಿದ್ದರೂ ನೇತ್ರದಂತೆ ಅದಕ್ಕೆ ದೃಷ್ಟೃತ್ವವು (ಜ್ಞಾನಾಶ್ರಯತ್ವವು) ಸಿದ್ಧಿಸುವದೆಂಬ ಸಿದ್ಧರ ಉಕ್ತಿಯೂ "ಜ್ಞಾನಕ್ಕೂ ಜ್ಞಾತೃವಾದ ಆತ್ಮನಿಗೂ ಅಭೇದವಿರುವದೆಂದು ಹೇಳುವ ವಿಜ್ಞಾನಭೈರವ ಎಂಬ ಗ್ರಂಥದ ಉಕ್ತಿಯೂ ಪ್ರಮಾಣಗಳಾಗಿವೆಯಲ್ಲದೆ ಪ್ರಕಾಶಮಾನನಾದ ವಿಷಯವು ಪ್ರಕಾಶಕ್ಕಿಂತಲೂ ಭಿನ್ನವಿಲ್ಲವು. ಆ ಪ್ರಕಾಶವು ವಿಮರ್ಶಶಕ್ತಿಗಿಂತಲೂ ಭಿನ್ನವಿಲ್ಲವು. ಆ ವಿಮರ್ಶಶಕ್ತಿಯು ನಾನು ಎಂಬ ಸ್ವರೂಪಕ್ಕಿಂತಲೂ ಭಿನ್ನವಲ್ಲಾ ನಾನು ಎಂಬ ಸ್ವರೂಪವು ಚಿದೇಕರೂಪವೇ ಆಗಿದೆ. ಎಂದು ಹೇಳುವ ಬೇರೆ ಪ್ರಮಾಣಗಳು ಇರುವವು. ಜ್ಞಾನವು ನಿನ್ನಿಂದ ಭಿನ್ನವಲ್ಲವು ಆ ಜ್ಞಾನಕ್ಕಿಂತಲೂ ಜ್ಞೇಯವು ಭಿನ್ನವಾಗಿಲ್ಲವು ಎಂದು ಹೇಳುವ ವಾಕ್ಯವು ಕೂಡಾ ಪ್ರಮಾಣವಾಗಿದೆ. ಇವೆಲ್ಲ ಪ್ರಮಾಣಗಳು ವ್ಯಾಖ್ಯಾನಕಾ

ಮಸ್ತಿ | ತದಾಬುಧಾಸಿರ್ಮಲದೃಷ್ಟಯೋಪಿ ಕಿಂಚಿನ್ನಪಶ್ಯಂತಿ ಭವಪ್ರಪಂಚ ಮಿತಿ || ಜ್ಞಾನಸು ಸಭವತೋಭಿನ್ನಂ ಜ್ಞೇಯಮ ಜ್ಞಾನಾತ್ಪೃಥಙ್ನಹಿ | ಇತಿ || ಯತ್ಕಾರ್ಯಂ ಯದಧೀನಂ ತತ್ತದಾತ್ಮಕಮೇವ ಯನ್ನೈವಂ ತನ್ನೈವಮು ಯಥಾ ಘಟಪಟಾಏತಿ, ವ್ಯಾಪ್ತೇಃ, ಕಾರ್ಯಸ್ಯಬಾಹ್ಯಕರಣಾಧೀನತ್ವಾತ್ ತಸ್ಯಾಂತಃ ಕರಣಾಧೀನತ್ವಾತ್, ತಸ್ಯಕೃತ್ರಿಮಪ್ರಮಾತ್ರಧೀನತ್ವಾತ್, ಅತಏವ ಚಿನ್ಮಯಾ ತ್ಮೇತಿ ಸೂತ್ರಿತತ್ವಾತ್ ತಸ್ಯದೇಶಕಾಲಾದಿ ಪರತಂತ್ರತ್ವಾತ್, ಸ್ವತಂತ್ರಶಕ್ತಿ ಕಂ ಚಿತ್ಪರಕರ್ತಾರಂವಿನಾ ಕಸ್ಯ ಚಿದುನ್ಮೇಷಾಸಂಭವಾತ್ | ಭಾವಾದೇರ್ವಿ ಶ್ವಸ್ಯ ಪರಪ್ರಮಾತೃನಿಷ್ಠತಯಾ ತತ್ಸ್ವರೂಪತ್ವಾಭ್ಯುಪಗಮಾತ್, ಜ್ಞಾನಾದೇ ರಪಿವೃತ್ತೇಃ ಪರಮಜ್ಞಾತ್ರಭಿನ್ನತ್ವಂ ಸುತರಾಂ ಸಿದ್ಧಮಿತ್ಯಾಸ್ಮಕೀನಾ ಶಿವಾ ದ್ವೈತ ಸಿದ್ಧಾಂತಪದ್ಧತಿಃ | "ಯತ್ರಹಿ ದ್ವೈತಮಿವಭವತಿ" ನೇಹನಾನಾಸ್ತಿಕಿಂ ಚನ" "ಮೃತ್ಯೋಸ್ಸಮೃತ್ಯುಮಾಪ್ನೋತಿ ಯ ಇಹನಾನೇವಪಶ್ಯತಿ" ಯತ್ರತ್ವ ಸ್ಯಸರ್ವಮಾತ್ಮೈವಾಭವತ್ ತತ್ಕೇನಕಂಪಶ್ಯೇತ್" ಇತಿ ಭೇದನಿಷೇಧಪ್ರತಿಪಾ ದಕವಾಕ್ಯಾನಾಂತು | ಯಸ್ಮಾದೇತತ್ಸಮುತ್ಪನ್ನಂ ಮಹಾದೇವಾಚ್ಚರಾಚರಂ

---

ರರು ಸ್ಪಷ್ಟವಾಗಿ ತೋರಿಸಿರುವರು. ಮತ್ತು ಯಾವ ಕಾರ್ಯವು ಯಾವದಕ್ಕೆ ಅರ್ಥವಾಗಿದೆ ಯೋ ಅದು ಅದಕ್ಕೆ ಅಭಿನ್ನವಾದದ್ದು ಎಂಬುವ ವ್ಯಾಪ್ತಿಯ ಬಲದಿಂದಲೂ ಕೂಡಾ ಜ್ಞಾನಸ್ವ ರೂಪತ್ವವು ಆ ಪರಶಿವನಿಗೆ ಸಿದ್ಧವಾಗುತ್ತದೆ. ಹ್ಯಾಗಂದರೆ—ಜ್ಞೇಯವು ಪ್ರತ್ಯಕ್ಷಕ್ಕೆ ಅಧೀನವು. ಆ ಪ್ರತ್ಯಕ್ಷ ಜ್ಞಾನವೆಂಬ ಕಾರ್ಯವು ಚಕ್ಷುರಾದಿ ಬಾಹ್ಯಕರಣಗಳಿಗೆ ಅರ್ಥವಾಗಿರುವುದರಿಂದ ಆ ಕಾರ್ಯವು ಬಾಹ್ಯಕರಣ ಸ್ವರೂಪವು. ಆ ಕರಣವು ಅಂತಃಕರಣಕ್ಕೆ ಅರ್ಥವಾಗಿರುವುದರಿಂದ ಆ ಬಾಹ್ಯಕರಣವು ಅಂತಃಕರಣಸ್ವರೂಪವು. ಆ ಅಂತಃಕರಣವು ಜೀವಾತ್ಮನಿಗೆ ಅರ್ಥವಾಗಿ ರುವುದರಿಂದ ಅದು ಆ ಜೀವಾತ್ಮದ ಸ್ವರೂಪವು ಆದ್ದರಿಂದಲೆ ಶಿವಸೂತ್ರವು ಚಿತ್ತನೇ ಆತ್ಮನೆಂದು ಹೇಳುತ್ತದೆ. ಆ ಜೀವಾತ್ಮನು ದೇಶಕಾಲಾದಿಗಳಿಗೂ ಆ ದೇಶಕಾಲಾದಿಗಳು ಸ್ವತಂತ್ರ ಶಕ್ತಿ ಯುಳ್ಳ ಪರಮಾತ್ಮನಿಗೂ ಅಧೀನಗಳಾದ್ದರಿಂದ ಸಮಸ್ತ ಪ್ರಪಂಚವು ಶಿವಸ್ವರೂಪವೇ ಆಗಿದೆ. ಆದ್ದರಿಂದ ಜ್ಞಾನಾದಿ ವೃತ್ತಿಗಳು ಪರಮ ಜ್ಞಾತೃವಾದ ಪರಶಿವನಿಗೆ ಅಭಿನ್ನಗಳೆಂದು ಸುತ ರಾಂ ಸಿದ್ಧವಾಗುವಿದ್ದು. ಈ ಪ್ರಕಾರವಾಗಿ ನಮ್ಮ ಶಿವಾದ್ವೈತ ಸಿದ್ಧಾಂತದ ಪದ್ಧತಿ ಎಂದು ತಿಳಿಯತಕ್ಕದ್ದು.

ಇನ್ನು "ವಿಜ್ಞಾತಾರಮರೆ ಕೇನಾವಿಜಾನೀಯಾತ್" ಮೊದಲಾದ ಶ್ರುತಿಗಳೂ ಕೂಡಾ ಆ ಪರಶಿವ ಬ್ರಹ್ಮವು ಜ್ಞಾನಾಶ್ರಯವೆಂದು ಹೇಳುತ್ತವೆ. "ನೇಹನಾನಾಸ್ತಿಕಿಂಚನ" "ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ತತ್ಕೇನಕಂ ಪಶ್ಯೇತ್" ಇವೇ ಮೊದಲಾದ ಭೇದವಿಲ್ಲೆಂ ದು ಹೇಳುವ ವಾಕ್ಯಗಳು ಸಮಸ್ತ ಪ್ರಪಂಚವು ಬ್ರಹ್ಮದ ಕಾರ್ಯವಾದುದರಿಂದ ಬ್ರಹ್ಮಕ್ಕೆ

ತಸ್ಮಾದೇತ ನ್ನಭಿದ್ಯೇತ ಯಥಾಕುಂಭಾದಿಕಂ ಮೃದಃ ‖ ಇತ್ಯುಕ್ತಪ್ರಕಾರೇಣ ಸರ್ವಸ್ಯವಿಶ್ವಸ್ಯ ಬ್ರಹ್ಮಕಾರ್ಯತಯಾ ತದಭಿನ್ನತ್ವೇನೈಕ್ಯಪ್ರತಿಪಾದಕತ್ವಂ. ನತು ಸ್ವಗತಭೇದ ನಿರಾಕರಣಪರತ್ವಂ. ತಸ್ಮಾದತ್ರಪ್ರಶ್ನವಿಷಯೀಭೂತಂ ಸರ್ವಶಕ್ತಿಕಂ ಪರಬ್ರಹ್ಮಲಿಂಗಮೇವೇತಿ ಸಂಕ್ಷೇಪಃ ‖

ಇತಿ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಸಿದ್ಧಲಿಂಗ ಶಿವಾಚಾ
ರ್ಯಾಸ್ಥಾನ ಪಂಡಿತ ಶಂಕರಶಾಸ್ತ್ರಿ ವಿರಚಿತಾ ಕೇನೋಪನಿಷತ್ಪ್ರಥ
ಮಖಂಡಸ್ಯ ಶಾಂಕರೀವ್ಯಾಖ್ಯಾ ಸಮಾಪ್ತಾಃ.
ಶಿವಂ ಶಿವಂ ಶಿವಂ ಭೂಯಾತ್.



ಶಾಂ‖ ಪ್ರಥಮಖಂಡೆ ಷಟ್‌ಸ್ಥಲರೂಪಂಬ್ರಹ್ಮ ಜಿಜ್ಞಾಸ್ಯತ್ವೇನೋಪದಿಷ್ಟಂ, ಯದ್ಯದ್ರೂಪಾವಚ್ಛಿನ್ನಾ ಮನ ಆದಿ ಷಡಿಂದ್ರಿಯಾಂಗಾನ್ಯತಮನಿರೂ

---

ಅಭಿನ್ನವಾಗಿರುವುದೆಂಬುದನ್ನು ಹೇಳುತ್ತವೆಯಲ್ಲದೆ ಸ್ವಗತ ಭೇದವೂ ಇಲ್ಲವೆಂದು ಹೇಳುವದಿಲ್ಲ.' ಈ ವಿಷಯದಲ್ಲಿ ಯಸ್ಮಾದೇತತ್ಸಮುತ್ಪನ್ನಂ ಜಗದೇತಚ್ಚರಾಚರಂ ತಸ್ಮಾದೇತನ್ನಭಿದ್ಯೇತ ಯಥಾಕುಂಭಾದಿಕಂ ಮೃದಃ "ಅಂದರೆ ಘಟವು ಮಣ್ಣಿನಿಂದ ಹುಟ್ಟಿದ ಕಾರಣ ಮಣ್ಣಿಗೆ ಅಭಿನ್ನವಾಗಿರುವಂತೆ ಈ ಚರಾಚರ ಪ್ರಪಂಚವು ಶಿವನಿಂದ ಹುಟ್ಟಿದಕಾರಣ ಶಿವನಿಗೆ ಅಭಿನ್ನವಾಗಿರುವುದು. ಎಂಬ ಶ್ರೀ ರೇಣುಕಭಗವತ್ಪಾದರ ಉಕ್ತಿಯೂ ಪ್ರಮಾಣವಾಗಿದೆ. ಆದ್ದರಿಂದ'ಪ್ರಶ್ನಕ್ಕೆ ವಿಷಯವಾದದ್ದು ಸರ್ವಶಕ್ತಿಕವಾದ ಪರಶಿವ ಬ್ರಹ್ಮವೆ ಹೊರತು ನಿರ್ಗುಣ ನಿರ್ವಿಶೇಷವಲ್ಲವು.

ಶಿವಾದ್ವೈತ ವಿದ್ಯಾವಿಭೂಷಣನೆಂದು ಪ್ರಶಸ್ತಿಪಡೆದ ಸಿರಸಿ ಗುರುಶಾಂತಶಾಸ್ತ್ರಿಯಿಂದ ವಿರಚಿತ
ಮಪ್ಪ ಕೇನೋಪನಿಷತ್ತಿನ ಪ್ರಥಮಖಂಡದ ಶಾಂಕರೀವ್ಯಾಖ್ಯೆಯ ಭಾವದರ್ಪವೆಂಬ
ಕನ್ನಡ ತಾತ್ಪರ್ಯವು ಸಮಾಪ್ತವಾದುದು.



ತಾ‖ ಈ ಕೇನೋಪನಿಷತ್ತಿನ ಪ್ರಥಮಖಂಡದಲ್ಲಿ ಹೇಳಿದ ತಾತ್ಪರ್ಯವೇನಂದರೆ, ದೇಶಪರಿಚ್ಛೇದ ಕಾಲಪರಿಚ್ಛೇದ ವಸ್ತುಪರಿಚ್ಛೇದಗಳಿಲ್ಲದ ಪರಶಿವಬ್ರಹ್ಮವು ತನ್ನ ಲೀಲೆಯಿಂದ ಮನಸ್ಸೆಂಬಂಗವುಳ್ಳದ್ದಾಗಲು ಮಹಾಲಿಂಗರೂಪವಾಯಿತು. ಈ ಮಹಾಲಿಂಗವೇ ಮನಸ್ಸಿಗೆ ಸಂಕಲ್ಪವಿಕಲ್ಪ ಅಧ್ಯವಸಾಯ ರೂಪಗಳಾದ ಕಾರ್ಯಗಳಲ್ಲಿ ಪ್ರವೃತ್ತಿಯನ್ನುಂಟುಮಾಡುತ್ತದೆ. ಶ್ರೋತ್ರವೆಂಬಂಗವುಳ್ಳದ್ದಾಗಲು ಪ್ರಸಾದಲಿಂಗರೂಪವಾಯಿತು. ಈ ಪ್ರಸಾದಲಿಂಗವು ಶ್ರೋತ್ರೇಂದ್ರಿಯವನ್ನು ಶಬ್ದವ ಕೇಳುವದರಲ್ಲಿ ಸಮರ್ಥವನ್ನಾಗಿ ಮಾಡುತ್ತದೆ. ತ್ವಗಿಂದ್ರಿಯವೆಂಬ

ಪಿತ ಪ್ರೇರಕತಾ. ತತ್ತದ್ರೂಪಸ್ಯ ಮಹಾಲಿಂಗಾದಿ ಷಡ್ಲಿಂಗಾಸ್ಯತಮಸ್ಯ, ತದೇವ ಬ್ರಹ್ಮ. ಇತ್ಯನೇನಬ್ರಹ್ಮತ್ವಮಿತಿ ನಿಶ್ಚೀಯಮಾನತ್ವಾತ್ |

ನನುದೃಕ್ಕಲಾದಿ ಗ್ರಾಹ್ಯಸ್ಯಾಪಿ ಬ್ರಹ್ಮತ್ವೇ ನಿಶ್ಚಿತೆ ತದೈಕೈಕೋಪಾಸನಯೈವ ಮುಕ್ತಿಃ ಸ್ಯಾತ್, ಕಿಮರ್ಥಂ ಷಟ್‌ಸ್ಥಲಬ್ರಹ್ಮೋಪಾಸನಂ, ಕಿಮರ್ಥಂ ಚ ತಚ್ಛ್ರವಣಮಿತ್ಯಾಶಂಕ್ಯಾಹ ||

ಮೂ॥ ಯದಿಮನ್ಯಸೆ ಸುವೇದೇತಿ ದಭ್ರಮೇವಾಪಿನೂನಂ।
ತ್ವಂವೇತ್ಥ ಬ್ರಹ್ಮಣೋರೂಪಂ ಯದಸ್ಯತ್ವಂ ಯದಸ್ಯದೇವೇಷ್ವಥನು ಮೀಮಾಂಸ್ಯಮೇವ ತೆ ಮನ್ಯೇವಿದಿತಂ ॥೧॥೨॥

---

ಅಂಗವುಳ್ಳದ್ದಾಗಿ ಚರಲಿಂಗವಾಯಿತು. ಈ ಚರಲಿಂಗವು ತ್ವಗಿಂದ್ರಿಯಕ್ಕೆ ಸ್ಪಾರ್ಶನ ಶಕ್ತಿಯನ್ನುಂಟುಮಾಡುತ್ತದೆ. ಚಕ್ಷುರಿಂದ್ರಿಯವೆಂಬ ಅಂಗವುಳ್ಳದ್ದಾಗಿ ಶಿವಲಿಂಗವಾಯಿತು. ಈ ಶಿವಲಿಂಗವು ಚಕ್ಷುರಿಂದ್ರಿಯಕ್ಕೆ ರೂಪಗ್ರಹಣಸಾಮರ್ಥ್ಯವನ್ನುಂಟುಮಾಡುತ್ತೆ. ರಸನೇಂದ್ರಿಯವೆಂಬ ಅಂಗವುಳ್ಳದ್ದಾಗಲು ಗುರುಲಿಂಗವಾಯಿತು. ಈ ಗುರುಲಿಂಗವು ರಸನೇಂದ್ರಿಯಕ್ಕೆ ರಸಗ್ರಹಣಸಾಮರ್ಥ್ಯವನ್ನುಂಟುಮಾಡುತ್ತದೆ. ಘ್ರಾಣೇಂದ್ರಿಯವೆಂಬ ಅಂಗವುಳ್ಳದ್ದಾಗಿ ಆಚಾರಲಿಂಗವಾಯಿತು. ಈ ಆಚಾರಲಿಂಗವು ಘ್ರಾಣೇಂದ್ರಿಯಕ್ಕೆ ಗಂಧಗ್ರಹಣ ಸಾಮರ್ಥ್ಯವನ್ನುಂಟುಮಾಡುತ್ತದೆ. ವಾಗಿಂದ್ರಿಯ ಮೊದಲಾದ ಪಂಚಕರ್ಮೇಂದ್ರಿಯಗಳಿಗೆ ವಚನ ಆದಾನ ವಿಹರಣ ಉತ್ಸರ್ಗ ಆನಂದಗಳೆಂಬ ವೃತ್ತಿಗಳಲ್ಲಿ ಪ್ರೇರಣೆಯನ್ನುಂಟುಮಾಡತಕ್ಕವುಗಳಾಗಿ ಮೇಲೆ ಹೇಳಿದ ಪ್ರಸಾದಲಿಂಗ ಮೊದಲಾದವುಗಳಾಗುತ್ತವೆ. ಯಾಕಂದರೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ ಭೇದವಿಲ್ಲೆಂದು ವೀರಶೈವಶಾಸ್ತ್ರವು ಹೇಳುತ್ತದೆ. ಆದಕಾರಣ ಈ ಪ್ರಥಮಖಂಡದ ಮಂತ್ರಗಳಲ್ಲಿರುವ ಯೇನ (ಯಾವದರಿಂದ) ಎಂಬುವ ತೃತೀಯಾಂತವಾದ ಯಚ್ಛಬ್ದದಿಂದ ಶ್ರೋತ್ರಸ್ಯ ಶ್ರೋತ್ರಂ | ಎಂಬ ಎರಡನೇ ಮಂತ್ರದಿಂದ ಮಹಾಲಿಂಗ, ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗಗಳೆಂಬ ಆರುಲಿಂಗಸ್ಥಲಗಳು. ಮುಮುಕ್ಷುಗಳಿಗೆ ಜಿಜ್ಞಾಸೆ ಮಾಡಲು ಯೋಗ್ಯವೆಂಬುವದು ಈ ಪ್ರಥಮಖಂಡದಲ್ಲಿ ಹೇಳಲ್ಪಟ್ಟಿತು. ಮತ್ತು "ತದೇವ ಬ್ರಹ್ಮ" (ಅದುವೇ ಬ್ರಹ್ಮವು) ಎಂಬುವದರಿಂದ ಆಚಾರಲಿಂಗವೂ ಬ್ರಹ್ಮವೇ ಗುರುಲಿಂಗವೂ ಬ್ರಹ್ಮವೇ ಎಂದು ಆರು ಲಿಂಗಗಳಿಗೂ ಬ್ರಹ್ಮತ್ವವು ಹೇಳಲ್ಪಟ್ಟಿತು. ತ್ವಂ ವಿದ್ಧಿ (ನೀನು ತಿಳಿ) ಎಂಬುವದರಿಂದ ಷಟ್‌ಸ್ಥಲ ಬ್ರಹ್ಮೋಪದೇಶ ವಿಧಿಯೂ ಕೂಡಾ ಹೇಳಲ್ಪಟ್ಟಿತು. ಎರಡನೇ ಮಂತ್ರದಲ್ಲಿರುವ ಅತಿಮುಚ್ಯ (ಬಿಟ್ಟು) ಆ ಲಿಂಗಗಳನ್ನು ಬಿಟ್ಟು ಅಂದರೆ ಸಮರಸಮಾಡಿ ಎಂಬುವದರಿಂದ ಆರು ಅಂಗಸ್ಥಲಗಳು ಅರ್ಥಾತ್ ಹೇಳಲ್ಪಟ್ಟವು ಹಾಗಾದರೆ ದೃಕ್ಕಲೆಯಿಂದ

ಶಾಂ|| ಯದೀತಿ, ಯದಿತ್ವಂ ಮನ ಆದೀನಾಂ ಸಾಕ್ಷಾತ್ ಪ್ರೇರಕತ್ವೇನೋಕ್ತಂ ಬ್ರಹ್ಮ ಸುವೇದ ಸುಖೇನ ಅನಾಯಾಸೇನ ಮಾನಸಾದಿ ವಿಷಯತಯಾ ಜಾನಾಮೀತಿ ಮನ್ಯಸೇ. ತರ್ಹಿ ನೂನಂ ನಿಶ್ಚಿತಂ ಅಸ್ಯ ಬ್ರಹ್ಮಣಃ ಅಪರಿಚ್ಛಿನ್ನಸ್ಯ ಯದ್ರೂಪಂ ಮಹಾಲಿಂಗಾದ್ಯಾಚಾರಲಿಂಗಾಂತಂ ಷಟ್‌ಸ್ಥಲಾಸ್ಯ ತವಮಂ ತತ್ ದಭ್ರಮೇವ ಅಲ್ಪಮೇವ ಪರಿಚ್ಛಿನ್ನಮೇವ. ತ್ವಂವೇತ್ಥ. || ಪರಂ

---

ಗ್ರಹಿಸಲು ಯೋಗ್ಯವಾದ ಇಷ್ಟಲಿಂಗದೊಳಗಣ ಆಚಾರಲಿಂಗ ಮೊದಲಾದವುಗಳೂ ಬ್ರಹ್ಮವೆ ಅಂದರೆ ಇಷ್ಟಲಿಂಗವೂ ಬ್ರಹ್ಮವಾಯಿತು. ಇದೊಂದು ಬ್ರಹ್ಮವನ್ನು ತಿಳಿದರೆ ಸಾಕು "ಬ್ರಹ್ಮವೇದ ಬ್ರಹ್ಮೈವ ಭವತಿ" (ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ. ಅಂದರೆ ಮುಕ್ತನಾಗುವನೆಂದು ಶ್ರುತಿಯು ಹೇಳುತ್ತಿರುವುದರಿಂದ ಇಷ್ಟಲಿಂಗವೆಂಬ ಬ್ರಹ್ಮದ ಜ್ಞಾನದಿಂದಲೇ ಮುಕ್ತಿಯಾಗುತ್ತಿರಲು ಅಂತರ್ಲಿಂಗ ಜ್ಞಾನ ಮತ್ತು ಅದರ ಧಾರಣ ಪೂಜನಗಳೇಕೆ ಬೇಕು (ಶಿವಲಿಂಗ ಚರಲಿಂಗಗಳ ಉಪಾಸನೆ ಯಾತಕ್ಕೆ ಬೇಕೆಂದು) ಶಂಕೆಯು ಪ್ರಾಪ್ತವಾಗಲು ಶ್ರುತಿಯು ಗುರುರೂಪದಿಂದ ಉತ್ತರವನ್ನು ಹೇಳುತ್ತದೆ. ಏನಂದರೆ ಎಲೈ ಶಿಷ್ಯನೆ ನೀನು ಚಕ್ಷುರಾದೀಂದ್ರಿಯಗಳಿಂದ ಆಚಾರಲಿಂಗ ಗುರುಲಿಂಗಗಳನ್ನೊಳಕೊಂಡ ಇಷ್ಟಲಿಂಗವನ್ನೇ ಆಗಲಿ ಅಥವಾ ಮತ್ತಾವುದಾದರೊಂದು ಲಿಂಗವನ್ನೇ ಆಗಲಿ ತಿಳಿದಿರುವನೆಂದು ತಿಳಿದುಕೊಂಡಿದ್ದರೆ ನಿಶ್ಚಯವಾಗಿಯೂ ಆ ಪರಶಿವಬ್ರಹ್ಮದ ಪರಿಚ್ಛಿನ್ನಸ್ವರೂಪವನ್ನೇ ತಿಳಿದುಕೊಂಡಂತಾಯಿತು. ಮತ್ತು ನಿನ್ನಂತೆ ದೇವತೆಗಳ ಮಧ್ಯದಲ್ಲಿ ಯಾರಾದರೂ ತಿಳಿದುಕೊಂಡಿದ್ದರೆ ಅವರೂಕೂಡಾ ಆ ಬ್ರಹ್ಮದ ಪರಿಚ್ಛಿನ್ನ ಸ್ವರೂಪವನ್ನೇ ತಿಳಿದಂತಾಯಿತು. ಆದರೆ ಆಚಾರಲಿಂಗದಲ್ಲಿ ಸಂಯಮವು ಸಿದ್ಧವಾಗಲು ಆ ಲಿಂಗವು ಪರಿಚ್ಛಿನ್ನವಾಗಿದ್ದರೂ ಆಚಾರಲಿಂಗದ ಪದವಿಯು (ಬ್ರಹ್ಮಪದವಿಯು) ಸಿಗುತ್ತದೆ. ಗುರುಲಿಂಗದಲ್ಲಿ ಸಂಯಮವು ಸ್ಥಿರವಾಗಲು ವಿಷ್ಣುಪದವಿಯೂ, ಶಿವಲಿಂಗದಲ್ಲಿ ಸ್ಥಿರವಾಗಲು ರುದ್ರಪದವಿಯೂ, ಚರಲಿಂಗದಲ್ಲಿ ಸಂಯಮವು ದೃಢವಾಗಲು ಈಶ್ವರಪದವಿಯೂ, ಪ್ರಾಪ್ತವಾಗುತ್ತದೆ ತ್ರಯಮೇಕತ್ರ ಸಂಯಮಃ (ಧ್ಯಾನಧಾರಣ ಸಮಾಧಿಗಳು ಒಂದರಲ್ಲಿ ಆದರೆ ಅದಕ್ಕೆ ಸಂಯಮವೆನ್ನುವರು. ಒಂದೊಂದು ಲಿಂಗದುಪಾಸನೆಯಾದರೂ ನಿಷ್ಫಲವಾಗದಿದ್ದರೂ ಈ ಚತುರ್ವಿಧ ಪದವಿಗಳನ್ನು ದಾಂಟಿ ಹೋದರೇನೇ ಮುಕ್ತಿಯು (ಪುನರಾವೃತ್ತಿಯಿಲ್ಲದ್ದು) ಪ್ರಸಾದಲಿಂಗದಲ್ಲಿ ಸಂಯಮವು ಸ್ಥಿರವಾಗಲು ಆ ಪ್ರಸಾದಲಿಂಗದ (ಸದಾಶಿವನ) ಅನುಗ್ರಹವಾಗಿ ಈ ಮುಕ್ತಿಯು ಸಿದ್ಧಿಸುವುದು. (ಮಹಾಲಿಂಗದಲ್ಲಿ ಸಮರಸಭಾವವನ್ನು ಹೊಂದಿಬಿಡುವನು.) ಹ್ಯಾಗಂದರೆ ಕಾರಾಗೃಹದಲ್ಲಿ ಬದ್ಧನಾದ ಓಬ್ಬಾನೊಬ್ಬ ಮನುಷ್ಯನು ಕೈಕಾಲುಗಳಲ್ಲಿರುವ ಬೇಡಿಗಳಿಂದ ಅತಿ ಪೀಡಿತನಾಗಿ ಅತ್ಯಂತ ದುಃಖಪಡುತ್ತಾ ಉತ್ತಮ ಕೆಲಸಗಳನ್ನು ಮಾಡುತ್ತ ಆ ರಾಜ್ಯಕ್ಕೆ ಮುಖ್ಯ ಅಧಿಪತಿಯಾದ ಮಹಾರಾಜನನ್ನು ಅನೇಕ ವಿಧವಾಗಿ ಸ್ತುತಿಮಾಡುತ್ತಿರಲು ಆ ಮಹಾರಾಜನು ಗೂಢಚಾರನ ವೇಷವನ್ನು ಹಾಕಿಕೊಂಡು ಸಂಚಾರಮಾಡುವಕಾಲದಲ್ಲಿ ಅವನ ಆತುರದ ಧೀನೋಕ್ತಿಯನ್ನೂ ತನ್ನ ಸ್ತುತಿಯನ್ನೂ

ಬ್ರಹ್ಮ ಮಹಾಲಿಂಗಂ ಪ್ರಪಂಚಾತೀತಮವ್ಯಯಂ | ತದೇವ ಸರ್ವಭೂತಾನಾ
ಮಂತ ಸ್ತ್ರಿ ಸ್ಥಾನಗೋಚರಂ|| ಮೂಲಾಧಾರೇಚಹೃದಯೇ ಭ್ರೂಮಧ್ಯೇ ಸರ್ವ
ದೇಹಿನಾಂ | ಜ್ಯೋತಿರ್ಲಿಂಗಂ ಸದಾಭಾತಿ ಯದ್ಬ್ರಹ್ಮೇತ್ಯಾಹುರಾಗಮಾಃ
ಅಪರಿಚ್ಛಿನ್ನಮವ್ಯಕ್ತಂ ಲಿಂಗಂ ಬ್ರಹ್ಮಸನಾತನಂ | ಉಪಾಸನಾರ್ಥಮಂತಸ್ಸ್ಯ
ಪರಿಚ್ಛಿನ್ನಂ ಸ್ವಮಾಯಯಾ || ಇತ್ಯುಕ್ತ ಪ್ರಕಾರೇಣಾ ಪರಿಚ್ಛಿನ್ನಾವ್ಯಕ್ತಸ್ಯೈ
ಕಸ್ಯೈವ ಪರಶಿವಲಿಂಗಸ್ಯ. ಉಪಾಸಕಧ್ಯಾನಪೂಜಾರ್ಥಂ ಸ್ವಸ್ವಾತಂತ್ರ್ಯ
ರಪರ್ಯಾಯೋರ್ಧ್ವ ಮಾಯಾಶಕ್ತ್ಯಾ. ಲಿಂಗತ್ರಯರೂಪತ್ವಾತ್ ಷಟ್‌ಸ್ಥ

---

ಕೇಳಿ ಅಕಸ್ಮಾತ್ ಕೃಪೆ ಹುಟ್ಟಿ ತನ್ನ ರಾಜಸ್ಥಾನಕ್ಕೆ ಹೋಗಿ ಆಸ್ಥಾನಕ್ಕೆ ಯೋಗ್ಯವಾ
ವೇಷವನ್ನು ಹಾಕಿಕೊಂಡು ಆ ದೀನನಾದ ಅಪರಾಧಿಯನ್ನು ಕರೆಯಿಸಿ ಅವನ ಬೇಡಿಗಳನ್ನು
ಕತ್ತರಿಸಿ ಹೋಗು? ಇನ್ನುಮೇಲೆ ಕೆಟ್ಟಕೆಲಸಮಾಡಲಾರನೆಂಬುವದು ನಿನಗೆ ನಿಯಾಮಕರಾ
ಅಧಿಕಾರಿಗಳಿಗೆ ಕಂಡುಬಂದರೆ ಅವರೇ ನಿನ್ನ ಉತ್ತಮವರ್ತನವನ್ನು ನೋಡಿ ಉತ್ತಮ ಕೆಲಸಕ್ಕೆ
ಹಚ್ಚುವರು. ಎಂದು ಹೇಳಿ ಕಳಿಸುವನು. ಆಮೇಲೆ ಆ ಅಪರಾಧಿಯು ಕೈ ಕಾಲು ನಡುಗಳಲ್ಲಿ
ರುವ ಮೂರು ಬೇಡಿಗಳು ಕತ್ತರಿಸಲ್ಪಟ್ಟದ್ದರಿಂದ ಅವನಿಗೆ ಉತ್ಸಾಹಬಂದು ಅವನು ಬಹು ಉ
ತ್ತಮಕೆಲಸಗಳನ್ನು ಮಾಡುತ್ತಿರಲು ಆ ಕಾರಾಗ್ರಹದನಿಯಮವು ತಪ್ಪಿಹೋಗಿಬಿಟ್ಟು ಮೇಲೂ
ಒಂದು ಸರಕಾರಿ ಅಧಿಕಾರವೇ ಅವನಿಗೆ ಸಿಕ್ಕುಬಿಡುತ್ತದೆ. ಆ ತನ್ನಧಿಕಾರದಲ್ಲಿ ಜಾಗರೂಕತೆ
ಯಿಂದ ಕೆಲಸಗಳನ್ನು ನಿರ್ವಹಿಸಲು ಅದಕ್ಕಿಂತಲೂ ಮೇಲಣ ಪದವಿಯು ಸಿಗುತ್ತದೆ. ಹೀ
ಗೆ ಕಡೆಗೆ ಮಹಾರಾಜನ ಅನುಗ್ರಹವಾಗಿ ಬಹು ಸುಖಸಾಮ್ರಾಜ್ಯವನ್ನು ಹೊಂದುವಂತೆ ಜೀ
ವನು ಮೂರು ಮಲಗಳೆಂಬ ಬೇಡಿಗಳಿಂದ ಪೀಡಿತನಾಗಿ ಸಂಸಾರವೆಂಬ ಕಾರಾಗ್ರಹದಲ್ಲಿ ಬದ್ಧ
ನಾಗಿರುವನು. ಇವನು ಬಹುದಿವಸಗಳಿಂದ ಮಾಡುತ್ತ ಬಂದ ಸತ್ಕರ್ಮಗಳಿಂದ ಅಂತರ್ಯಾಮಿ
ವೇಷದಿಂದ ಅವನ ಸತ್ಕರ್ಮವನ್ನು ನೋಡಿದ ಸದಾಶಿವನು ಆ ಅಂತರ್ಯಾಮಿ ವೇಷವನ್ನು ಬದ
ಲಾಯಿಸಿ ಗುರುವಿನ ವೇಷದಿಂದ ಆ ಜೀವನ ಮೂರು ಮಲರೂಪವಾದ ಬೇಡಿಗಳನ್ನು ಮೂರು ದೀ
ಕ್ಷೆಗಳೆಂಬ ಬಾಣಗಳಿಂದ ಕತ್ತರಿಸಿ ಎಲೈ ಮಗನೆ ನೀನು ಪ್ರತಿನಿತ್ಯದಲ್ಲಿಯೂ, ಲಿಂಗಧಾರಣ ಭಸ್ಮ
ಧಾರಣಮೊದಲಾದ ಸತ್ಕರ್ಮಗಳನ್ನು ಆಚರಿಸು ಎಂದು ಆಜ್ಞೆಯಂ ಮಾಡಿಬಿಡುವನು.
ಆಮೇಲೆ ಅವನು ಅದೇ ಪ್ರಕಾರ ವರ್ತಿಸುತ್ತ ಶಿವಯೋಗಶಾಸ್ತ್ರದಲ್ಲಿ ಹೇಳಲ್ಪಟ್ಟ ಪ್ರ
ಕಾರ ಅಭ್ಯಾಸಮಾಡುತ್ತಿರಲು ಬ್ರಹ್ಮ, ವಿಷ್ಣು, ರುದ್ರ, ಈಶ್ವರರುಗಳ ಚತುರ್ವಿಧಪದವಿಗಳು
ಪ್ರಾಪ್ತಗಳಾಗಿ ಕಡೆಗೆ ಸದಾಶಿವನ ಅನುಗ್ರಹವಾಗಿ ಮುಕ್ತನಾಗುವನು. ಅಂದರೆ ಆ ಪದವಿಗ
ಳು ನಿತ್ಯಗಳಾಗಿದ್ದರೂ ಆ ಪದವೀಧರರು ಅನಿತ್ಯರಾಗಿರುವರು ಯಾಕಂದರೆ ಆ ಪದವಿಗಳನ್ನು
ಬಿಟ್ಟು ಮುಂದೆ ಶಾಶ್ವತ ಮುಕ್ತಿಗೆ ಹೋಗುತ್ತಾರಲ್ಲವೆ? ಅದ್ದರಿಂದ ಎಲೈ ಶಿಷ್ಯನೆ ನೀನು
ಅನಾಯಾಸದಿಂದ ತಿಳಿದುಕೊಂಡದ್ದು ಅಪರಿಚ್ಛಿನ್ನವಾದ ಪರಶಿವಬ್ರಹ್ಮವಲ್ಲಾ ಸಂಪೂರ್ಣವಾದ
ಷಟ್‌ಸ್ಥಲಗಳ ಸಾಮರಸ್ಯವನ್ನು ತಿಳಿದರೇನೇ ನಿನಗೆ ಪರಮುಕ್ತಿಯು ಒಂದೊಂದನ್ನೇ ತಿಳಿದು

ರೂಪವತ್ವಾಚ್ಚ ಚಕ್ಷುರಾದಿಗ್ರಾಹ್ಯತ್ವ ಮತಏವ ಭವತಾವಿದಿತಂ ರೂಪಂ ಪರಿಚ್ಛಿನ್ನಮೇವೇತಿಜ್ಞಾಯತೆ ಏತತ್ಪರಿಚ್ಛಿನ್ನಾಚಾರಾದಿ ಲಿಂಗಾನತಿರಿಕ್ತೇಷ್ಟ ಲಿಂಗಜ್ಞಾನಸ್ಯ ತತ್ತದ್ಬ್ರಹ್ಮಾದಿ ಪದವೀಪ್ರಾಪಕತ್ವೇಪಿ ನತು ಪರಮುಕ್ತಿರಿತ್ಯರ್ಥಃ ಅಥ ಚತ್ವಮಿವದೇವೇಷು ಯಃಕಶ್ಚಿತ್ಸುವೇದೇತಿ ಮಸ್ಯತೇಸ್ಯ ಬ್ರಹ್ಮಣೋರೂಪಂ ಯತ್. ತದಪ್ಯಲ್ಪಮೇವ ನವೇತ್ಥ ತಸ್ಮಾದೇಷ ತೆ ತ್ವಯಾ ವಿದಿತಂ ಚಕ್ಷುರಾದಿನಾಜ್ಞಾತಂ ವಿಮಾಮಾಂಸ್ಯಂನು ವಿಚಾರಣೀಯಂಖಲು ||

ಮೂ|| ನಾಹಂಮನ್ಯೇ ಸುವೇದೇತಿ ನೋನವೇದೇತಿವೇದಚ । ಯೋನಸ್ತದ್ವೇದ ತದ್ವೇದ ನೋನ ವೇದೇತಿ ವೇದಚ ||೧೦|| ೨||

---

ಮಾತ್ರ ಆಯಾಯ ಪದವಿಗಳು ಮಾತ್ರ ಸಿಗಬಹುದು. ಆದಕಾರಣದಿಂದ ನೀನು ಇಷ್ಟಕ್ಕೇನೆ ತೃಪ್ತನಾಗದೆ ಇನ್ನು ಷಟ್‌ಸ್ಥಲರೂಪವಾದ ಸರ್ವಾತ್ಮಕವಾದ ಬ್ರಹ್ಮವನ್ನು ಶ್ರವಣಮನನಾದಿಗಳಿಂದ ಚನ್ನಾಗಿ ತಿಳಿದುಕೊಳ್ಳುವವನಾಗು ಎಂದು ಶ್ರುತಿದೇವಿಯು ಗುರುರೂಪದಿಂದ ಶಿಷ್ಯನನ್ನುದ್ದೇಶಿಸಿ ಹೇಳಿದಳು. ಮತ್ತು ಆ ಪರಶಿವ ಬ್ರಹ್ಮದ ಪರಿಚ್ಛಿನ್ನವಾದ ರೂಪವು ಪಾರಮಾರ್ಥಿಕವೆಂಬ ವಿಷಯದಲ್ಲಿ ಹಿಂದೆ ಶಾಂಕರೀಕಾರರು ಅನೇಕ ಯುಕ್ತಿಗಳಿಂದ ಸಿದ್ಧಮಾಡಿದ್ದಾರೆ. ಮತ್ತು ಶ್ರೀರೇಣುಕಭಗವತ್ಪಾದರ ಉಕ್ತಿಗಳನ್ನು ಕೊಟ್ಟಿದ್ದಾರೇನಂದರೆ ಸರ್ವಜಗತ್ಸ್ವರೂಪವೂ ಸರ್ವಜಗತ್ತಿಗೆ ಅಧಿಪತಿಯಾಗಿಯೂ ಇರುವ ಪರಬ್ರಹ್ಮ ಮಹಾಲಿಂಗವೇ ಸರ್ವಪ್ರಾಣಿಗಳೊಳಿರುವ ಮೂರು ಸ್ಥಾನ (ಮೂಲಾಧಾರ ಹೃದಯ ಭ್ರೂಮಧ್ಯ) ಗಳಲ್ಲಿ ಗೋಚರಿಸುವದಾಗಿಯೂ ಜ್ಯೋತಿರ್ಲಿಂಗ ರೂಪವಾಗಿಯೂ ತನ್ನ ಊರ್ಧ್ವ ಮಾಯಾಶಕ್ತಿಯಿಂದ ಅಂತಸ್ಥಿತವಾಗಿಯೂ, ಪರಿಚ್ಛಿನ್ನವಾಗಿಯೂ ಇರುತ್ತದೆ. ಎಂದು ಹೇಳಿರುವವರಿಂದ ಘ್ರುಕಕಾಶ್ಯ ನ್ಯಾಯದಂತೆಯೂ, ಅಹಿಕುಂಡಲ ನ್ಯಾಯದಂತೆಯೂ, ಆ ಪರಿಚ್ಛಿನ್ನವಾದ ಬ್ರಹ್ಮದ ಸ್ವರೂಪವೂ ಪಾರಮಾರ್ಥಿಕವೆಂದೇ ಗೊತ್ತಾಗುತ್ತದೆ ಆದ್ದರಿಂದ ಶ್ರುತಿದೇವಿಯೂ ಕೂಡಾ ಕೇವಲಂ ಪರಿಚ್ಛಿನ್ನ ಬ್ರಹ್ಮಜ್ಞಾನದಿಂದ ಪರಮುಕ್ತಿಯು ಸಿಗುವದಿಲ್ಲಾದಕಾರಣ ಇನ್ನೂ ವಿಚಾರಿಸ್ಟೆ ಎಂದು ಅಪ್ಪಣೆಮಾಡಿದಳು ||೯|| ||೨||

ಎಲೈ ಶಿಷ್ಯನೇ ನೀನು ತಿಳಿದಿರುವ ಬ್ರಹ್ಮವು ಇಷ್ಟಲಿಂಗರೂಪವೇ ಆಗಲಿ ಪ್ರಾಣಲಿಂಗರೂಪವೇ ಆಗಲಿ ಆಚಾರಾದಿ ಲಿಂಗರೂಪವೇ ಆಗಲಿ ಆ ರೂಪವು ಪರಿಚ್ಛಿನ್ನವಾದದ್ದು ಬ್ರಹ್ಮದ ಅಪರಿಚ್ಛಿನ್ನ ಸ್ವರೂಪವನ್ನು ನೀನು ತಿಳಿದಂತಾಗಲಿಲ್ಲಾ? ಬ್ರಹ್ಮದ ಪರಿಚ್ಛಿನ್ನ ಅಪರಿಚ್ಛಿನ್ನ ರೂಪಗಳು ಪಾರಮಾರ್ಥಿಕಗಳೇ ಆಗಿರುವವು ಮತ್ತು ಬ್ರಹ್ಮವು ಸರ್ವಾತ್ಮಕವೇ ಸದಸದ್ರೂಪ ಪ್ರಪಂಚಸ್ವರೂಪವೇ ಆಗಿದೆ. ಆದ್ದರಿಂದ ನೀನು ಸದ್ರೂಪದಿಂದ ಬ್ರಹ್ಮವನ್ನು ತಿಳಿದರೂ ಬ್ರಹ್ಮದ

ಶಾಂ|| ಏವಮಾಚಾರ್ಯೇಣೋಕ್ತಃ ಶಿಷ್ಯಃ—ನಿರುಪದ್ರವಸ್ಥಲಮುಪಗ ಮ್ಯಪೂರ್ವೋಕ್ತಂ ‹ಅನ್ಯದೇವತದ್ವಿದಿತಾದಥೋ ವಿದಿತಾದಧಿ›› ಇತ್ಯಾಚಾರ್ಯ ವಚನಮರ್ಥತಃ ಶ್ರವಣಮನನಾದಿನಾ| ನಿಶ್ಚಿತ್ಯ ಗುರುಮುಪಗಮ್ಯಾಹ|| ನಾಹಂ ಮನ್ಯೇ| ಇತಿ|| ಯದೇತದೇವ ವಸ್ತು ಸ್ವಸ್ವಾತಂತ್ರ್ಯ ಸ್ವಲೀಲಾದಿನಾ ಭಾವಾ ಭಾವಪ್ರಪಂಚರೂಪಂ| ಭಕ್ತಾನುಗ್ರಹಾರ್ಥಂ ಷಟ್ ಸ್ಥಲರೂಪಂವರ್ತತೆ. ತದಹಂ ಸುವೇದೇತಿ ಸುಖೇನ ಅನಾಯಾಸೇನ ಚಕ್ಷುರಾದಿನಾ ಘಟತದಭಾವವತ್ ವೇ ದೇತಿ ನೈವಮನ್ಯೇ ಘಟತದಭಾವಯೋರ್ಹಿ ಜ್ಞಾನಂ ತಯೋರ್ನಿಶ್ಚಿತಾಭ್ಯಾಂ ಭಾವತ್ವಾ ಭಾವತ್ವಾಭ್ಯಾಂ ಭವಿತುಂ ಶಕ್ಯಂ. ನಚತಥಾ ಭಾವಾಭಾವಕರ ಬ್ರ ಹ್ಮಣೋ ಜ್ಞಾನಂ ಯದಿಭಾವತ್ವೇನತಸ್ಯಜ್ಞಾನಂ ತದಪಿರೂಪಂ ದಭ್ರಮೇವ ನಸಂಪೂರ್ಣಂ. ಯದಿಚಅಭಾವತ್ವೇನ ತದಪಿ ತಥೈವೇತ್ಯಾಹ ಗುರುರಿತಿಜ್ಞಾತ್ವಾ ಹಶಿಷ್ಯಃ ನಾಹಂಮನ್ಯೇ ಇತಿ ತಥಾಚಸ್ಯೈವತ್ವಂ ಬ್ರಹ್ಮಜ್ಞಾನವಾನ್, ಇತಿ ಗು ರುಣಾ. ಉಕ್ತೆ ಶಿಷ್ಯಃ ಪುನರಾಹ›› ನೋನವೇದೇತಿ ವೇದಚೇತಿ. ನೋನವೇ ದೇತಿ ನ ಕಿಂತು ವೇದಚ ವೇದ್ಯೈವೇತ್ಯರ್ಥಃ. ನನ್ವಿದಂ ಕಥ ಮುಪಪನ್ನಂ ಭವತಿ

---

ಇನ್ನೊಂದು ಕಾರ್ಯರೂಪವಾದ ಅಸದ್ರೂಪವನ್ನು ತಿಳಿದಂತಾಗಲಿಲ್ಲಾ ಕಾರ್ಯರೂಪವಾದ ಅಸದ್ರೂಪವನ್ನು ತಿಳಿದರೂ ಕಾರಣರೂಪವಾದ ಸದ್ರೂಪವನ್ನು ತಿಳಿದಂತಾಗಲಿಲ್ಲಾದ್ದರಿಂದ ಇನ್ನೂ ಬ್ರಹ್ಮವನ್ನು ಚನ್ನಾಗಿ ವಿಚಾರಿಸು ಎಂದು ಗುರುವು ಹೇಳಲು ಶಿಷ್ಯನು ನಿರುಪ ದ್ರವಸ್ಥಲಕ್ಕೆ ಹೋಗಿ ಪೂರ್ವದಲ್ಲಿ "ಹೇಳಿದ›› ಅನ್ಯದೇವತದ್ವಿದಿತಾದಥೊ ಅವಿದಿತಾದಧಿ›› ಎಂಬುವ ಆಚಾರ್ಯನ ಉಕ್ತಿಯರ್ಥವನ್ನು ಶ್ರವಣಮನನಾದಿಗಳಿಂದ ನಿಶ್ಚಯಿಸಿಕೊಂಡು ಪುನಃ ತನ್ನ ಗುರುವಿನ ಸಮೀಪಕ್ಕೆ ಹೋಗಿ ಎಲೈ ಗುರುವೆ ? ಯಾವ ವಸ್ತುವು ತನ್ನ ಸ್ವಾತಂತ್ರ್ಯಶ ಕ್ತಿಯಿಂದ ಅಥವಾ ತನ್ನ ಲೀಲಾಶಕ್ತಿಯಿಂದ ಸದಸದ್ರೂಪ ಪ್ರಪಂಚ ಸ್ವರೂಪವಾಗಿಯೂ ಪಾ ಪಕ್ವಮ್ಯಲರಾದ ಭಕ್ತರನ್ನುದ್ಧರಿಸುವದಕ್ಕೋಸ್ಕರ ಗುರುಲಿಂಗ ಜಂಗಮರೆ.ಬ ಭಾವ ಇಷ್ಟ ಪ್ರಾಣಲಿಂಗರೂಪವಾಗಿಯೂ ಷಟ್ ಸ್ಥಲರೂಪವಾಗಿಯೂ ಇರುತ್ತದೆಯೊ ಆ ವಸ್ತುವನ್ನು ನಾನು ಅನಾಯಾಸದಿಂದ (ಚಕ್ಷುರಾದಿಯಿಂದ) ಘಟ ಮತ್ತು ಘಟದ ಅಭಾವವನ್ನು ಹೇಗೆ ತಿಳಿಯುತ್ತೇನೆಯೊ ? ಹಾಗೆ ತಿಳಿಯಲಿಲ್ಲಾ ಯಾಕಂದರೆ ಘಟದ ಜ್ಞಾನವು ಘಟವಲ್ಲಿ ನಿಶ್ಚಯಿ ಸಲ್ಪಟ್ಟ ಘಟತ್ವ ಪುರಸ್ಕಾರದಿಂದ ಸಂಭವಿಸುತ್ತದೆ. ಮತ್ತು ಘಟಾಭಾವದ ಜ್ಞಾನವಾದರೂ ಅಲ್ಲಿರುವ ಘಟಾಭಾವತ್ವ ರೂಪದಿಂದ ಸಂಭವಿಸುವದು. ಈ ಪ್ರಕಾರ ಬ್ರಹ್ಮವನ್ನು ತಿಳಿಯಲು ಶಕ್ಯವಿಲ್ಲಾ. ಕೇವಲ ಸದ್ರೂಪವೆಂದು ತಿಳಿದರೆ ಆ ಜ್ಞಾನವೂ ಕೂಡ ಪರಿಚ್ಛಿನ್ನವಾದದ್ದು. ಕೇ ವಲ ಅಸದ್ರೂಪವೆಂದು ತಿಳಿದರೆ ಅದೂಕೂಡ ಪರಿಚ್ಛಿನ್ನವೆ? ಸಂಪೂರ್ಣ ವಸ್ತುವಿಷಯಕವಾದ ದ್ದಲ್ಲವೆಂದು ಗುರುವು ಹೇಳುತ್ತಾನಾದಕಾರಣ ನಾನು ಆ ವಸ್ತುವನ್ನೇ ತಿಳಿಯಲಿಲ್ಲಾ ಎಂದು

ಯಸ್ಯಾಜ್ಞಾಯಮಾನತ್ವಂ ತಸ್ಯೈವ ಜ್ಞಾಯಮಾನತ್ವಮಿತಿಚೇದುಚ್ಯತೇ, ಪರ ಶಿವಲಿಂಗಸ್ಯ ಸರ್ವಾತ್ಮಕತ್ವಾತ್ ಸದಸತೋರ್ದೃಶ್ಯಮಾನತ್ವಾತ್ ತೇನ ತಜ್ಜ್ಞನ ಕಸ್ಯ ತದಾತ್ಮಕತ್ವಾತ್ ಜಗಜ್ಜನ್ಮಾದಿಕಾರಣತ್ವೇನೈವ ಪರಶಿವಲಿಂಗಂ ಜ್ಞಾತ ವ್ಯಮಿತಿ ಸೂತ್ರಕೃತಾದರ್ಶಿತತ್ವಾತ್, ಜಗತೋ ಭಾವಾಭಾವರೂಪಸ್ಯ ಜನ್ಮಾದಿ ಯತಃ ತಸ್ಯ ಭಾವಾಭಾವತ್ವಸ್ಯ ಸುತರಾಂ ಸಿದ್ಧತ್ವಾತ್, ಭಾವಾಭಾವರೂಪಂ ಪರಶಿವಲಿಂಗಮಿತಿ ವೇದ್ಮೈವ. ತಸ್ಮಾತ್ ಜ್ಞಾಯಮಾನತ್ವಂ ತಸ್ಯೈಕೇನ ಭಾವ ತ್ವೇನೈಕೇನಾಭಾವತ್ವೇನಾವಾ ನವೇದ ತಸ್ಮಾದಜ್ಞಾಯಮಾನತ್ವಮಪಿ ಅತೋ ನಾಹಂಮನ್ಯೇ ಸುವೇದೇತಿ | ನೋನವೇದೇತಿವೇದಚ | ಇತ್ಯನಯೋರ್ವಾಕ್ಯ ಯೋಃ ಪರಸ್ಪರ ವಿರುದ್ಧಾರ್ಥ ಪ್ರತಿಪಾದಕತ್ವಂ | ಅತ್ರ ಪ್ರಥಮವಾಕ್ಯೇನ ದ್ವಿ ತೀಯವಾಕ್ಯೇನಚ ಅನ್ಯದೇವತದ್ವಿದಿತಾದಿತ್ಯಾಚಾರ್ಯೋಕ್ತಾರ್ಥೋದರ್ಶಿತಃ | ಅಹಮಿವ ನಃ ಶಿಷ್ಯಾಣಾಂ ಮಧ್ಯೇ ಯಃ ತದಾಚಾರ್ಯೋಕ್ತಂ ಸಂಶಯವಿಪರ್ಯ ಯಾದಿರಾಹಿತ್ಯೇನ ವೇದ ಜಾನಾತಿ, ಸಃ ತತ್ ಸರ್ವಾತ್ಮಕಂ ಪರಂಬ್ರಹ್ಮಲಿಂಗಂ ವೇದ. ಸೋಪಿನೋ ವೇದೇತಿನ. ಕಿಂತು ವೇದಚ ವೇದ್ಮೈವ ಇದಂಚ ಪರಶಿವಲಿಂ

---

ಹೇಳುವದೆ ಉತ್ತಮವೆಂದು ತಿಳಿದು; ಎಲೈ ಗುರುವೇ! ನಾನು ಆ ಬ್ರಹ್ಮವನ್ನು ಚನ್ನಾಗಿ ತಿಳಿ ದಿಲ್ಲಾ' ಎಂದು ಶಿಷ್ಯನು ಹೇಳಲಾಗಿ, ಹಾಗಾದರೆ ಎಲೈ ಶಿಷ್ಯನೇ! ನೀನು ಬ್ರಹ್ಮಜ್ಞಾನಿ ಯೇ ಆಗಲಿಲ್ಲವಲ್ಲಾ ಎಂದು ಗುರುವು ಹೇಳಲಾಗಿ, ಪುನಃ ಶಿಷ್ಯನು ಆ ಪರಶಿವ ಬ್ರಹ್ಮವನ್ನು ತಿಳಿದಿಲ್ಲವೆಂದಲ್ಲ ತಿಳಿದಿರುವೆನು ಎಂದು ಶಿಷ್ಯನು ಉತ್ತರ ಕೊಟ್ಟನು. ಆದರೆ ಯಾವ ಬ್ರಹ್ಮ ವನ್ನು ತಿಳಿದಿಲ್ಲವೆಂದು ಹೇಳಿದನೋ ಅದನ್ನೇ ಪುನಃ ತಿಳಿದಿರುವೆನೆಂದು ಹೇಳುವದು ಯುಕ್ತ ವಾಗಿ ತೋರುವದಿಲ್ಲ, ಅಂದಮೇಲೆ. ಶ್ರುತಿಯು ಆ ರೀತಿಯಾಗಿ ಯಾಕೆ ಹೇಳಿರಬಹುದು? ಅಂದರೆ ಕಾಣುವ ಸದಸದ್ರೂಪವಾದ ಜಗತ್ತನ್ನು ಹುಟ್ಟಿಸಿದ ಶಿವನು ಕಾರ್ಯಕಾರಣರೂಪ ಗಳಾದ ಅಸತ್ತು ಮತ್ತು ಸತ್ತು ಇವುಗಳ ಸ್ವರೂಪನೆ ಇದ್ದಾನೆಂದು ತಿಳಿದುಬರುವಕಾರಣದಿಂ ದಲೂ, ಮತ್ತು ಶಿವನನ್ನು ಜಗತ್ತಿನ ಉತ್ಪತ್ತಿ ಸ್ಥಿತಿ ಲಯಾದಿಗಳಿಗೆ ಕಾರಣನ್ನನ್ನಾಗಿಯೇ ತಿಳಿದು ಕೊಳ್ಳಬೇಕೆಂದು ಸೂತ್ರಕಾರರು (ವ್ಯಾಸರು) ತೋರಿಸಿರುವದರಿಂದಲೂ, ಪರಶಿವಬ್ರಹ್ಮವು ಸದಸದ್ರೂಪವೆಂದು ತಿಳಿದನು. ಕೇವಲ ಸದ್ರೂಪವೆಂತಲೂ, ಕೇವಲ ಅಸದ್ರೂಪವೆಂತಲೂ ತಿಳಿ ಯಲಿಲ್ಲವಾದಕಾರಣ ಮೇಲೆ ಹೇಳಿದ ಶ್ರುತಿ ವಾಕ್ಯಗಳಿಗೆ ವಿರೋಧವಿಲ್ಲಾ. ನನ್ನಂತೆ ಶಿಷ್ಯರ ವ್ಮಧ್ಯದಲ್ಲಿ ಯಾವನಾದರೂ ಆ ಸರ್ವಾತ್ಮಕವಾದ ಪರಶಿವಲಿಂಗವನ್ನು ತಿಳಿಯುವನೋ? ಅವನೂ ಆ ಸದಸದ್ರೂಪವಾದ ಪರಶಿವ ಲಿಂಗವನ್ನು ತಿಳಿಯಲಿಲ್ಲವೆಂದಲ್ಲಾ ತಿಳಿದೇ ತಿಳಿದನು. ಆ ಪರ ಶಿವಬ್ರಹ್ಮವನ್ನು ತಿಳಿದಿರುವೆನು ಎಂಬುವ ಶಿಷ್ಯನ ವಾಕ್ಯದಿಂದ ಆ ಬ್ರಹ್ಮವು ಸರ್ವ ಜಗದ್ರೂಪ

ಗಂ ಪರಾಹಂತಾಸ್ಪದಂಭವತಿ ಸತ್ವತ್ಯಂತಮೇವಾಹಂಕಾರಾನಾಸ್ಪದಮಿತಿಜ್ಞಾ ಪನಾರ್ಥಂ ||೧೦||೨||

ಮೂ|| ಯಸ್ಯಾಮತಂ ತಸ್ಯಮತಂ ಮತಂ ಯಸ್ಯನವೇದಸಃ । ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಂ ||೧೧||

ಶಾಂ|| ಶಿವೋಭೋಕ್ತಾ ಶಿವೋಭೋಗ್ಯಂ ಶಿವೋಭೋಗಃ ಶಿವೋಖಿಲಂ| ಶಿವಏವ ಶಿವೋಹಂತು | ತಸ್ಮಾದನ್ಯನ್ನವಿದ್ಯತೆ || ಇತ್ಯುಕ್ತಪ್ರಕಾರೇಣ ಸದಸದ್ವಿಶ್ವಾತ್ಮಕಃ ಶಿವೋಹಮಿತಿ ಭಾವದಾರ್ಢ್ಯ ಸಂತ್ಯಕ್ತದೇಹಕಲತ್ರ ಪುತ್ರಾದ್ಯಭಿಮಾನಸ್ಯ ಸರ್ವಂ ವಿಶ್ವಂ ಸ್ವದೇಹಂ ಮನ್ಯಮಾನಸ್ಯ ಭಕ್ತಸ್ಯ | ನರಃ ಸ್ವದೇಹಕಂಡೂತಿಂ ವಿಜಾನಾತಿ ಯಥಾತಥಾ | ಸರ್ವಸೂಕ್ಷ್ಮವ್ಯವಹಿತ ವಿಪ್ರಕೃಷ್ಟಾರ್ಥಜ್ಞಾನಂ ಭವತೀತ್ಯಾಹ|| ಯಸ್ಯೇತಿ. ಪರಶಿವಮಹಾಲಿಂಗಂ ಮತಂ ಮಯಾಜ್ಞಾತಮಿತಿ ಯಸ್ಯದೃಢಪ್ರತ್ಯಯೋಭವತಿ ಪೂರ್ವೋಕ್ತ ಲಿಂಗಾಂಗಸಾಮರಸ್ಯಾಪರಪರ್ಯಾಯ ಶಿವಯೋಗಪ್ರಶಮಿತ ಶಿವಜೀವೋ ಭಯಭ್ರಾಂತಿ ಸರ್ವತ್ರಾಭ್ಯ

---

ಪರಶಿವನೇ ನಾನು ಎಂಬುವ ಪರಾಹಂಕಾರಕ್ಕೆ ವಿಷಯವಾಗುತ್ತದೆ ಎಂದೂ, ಅದು ಅಹಂಕಾರಕ್ಕೆ ಎಂದೂ ವಿಷಯವಾಗದೆ ಇರುವದಿಲ್ಲೆಂದೂ ಸ್ಪಷ್ಟವಾಯಿತು. ||೧೦||೨||

ಟೀ|| ಯಾವನು ಭೋಕ್ತೃಭೋಗ್ಯಭೋಗರೂಪಗಳಾದ ಪದಾರ್ಥಗಳೂ ಸಮಸ್ತ ಪ್ರಪಂಚವೂ ನಾನೂ ಕೂಡಾ ಶಿವನೇ ಆಗಿದ್ದೇನೆಂದು ದೃಢವಾಗಿ ಭಾವಿಸುವನೋ ? ಅವನಿಗೆ ಶಿವಾತಿರಿಕ್ತವಾಗಿ ಯಾವದೂ ತೋರುವದಿಲ್ಲಾ ಎಂಬುವ ಪ್ರಾಚೀನರ ಉಕ್ತಿಯಂತೆ ಹೆಂಡರುಮಕ್ಕಳು ನನ್ನವರು ಎಂಬುವ ಮಮಕಾರವೂ ದೇಹದಲ್ಲಿರುವ ಅಹಂಕಾರ ಮಮಕಾರಗಳು ಯಾವನಿಗಿರುವದಿಲ್ಲವೋ? ಮತ್ತು ಸಮಸ್ತ ಜಗತ್ತನ್ನೇ ತನ್ನ ದೇಹವನ್ನಾಗಿ ಯಾವನು ತಿಳಿಯುತ್ತಾನೆಯೊ ? ಅವನಿಗೆ ವಿಶ್ವಾತ್ಮಕ ಶಿವನೇ ನಾನೆಂಬ ಭಾವವು ದೃಢವಾಗಿ ಹೋಗುವದು. ಆ ಮೇಲೆ ಅವನು ಸದಾಶಿವನಂತೆ ಸಮಸ್ತ ಜಗತ್ತಿನ ಮೇಲೆ ನಾನು ನನ್ನದು ಎಂಬ ಪರಾಹಂಕಾರ ಮಮಕಾರಗಳನ್ನು ಮಾಡುತ್ತ ತನ್ನ ಮೂರೂವರೆ ಮೊಳದ ಶರೀರವನ್ನೇ ಮರತುಬಿಡಲಾಗಿ ಅವನಿಗೆ ಸರ್ವ ಪ್ರಪಂಚವೂ ಶರೀರವೇ ಆಗಿಬಿಡುವದು. ಅನಂತರದಲ್ಲಿ ನಮ್ಮ ಮೂರೂವರೆ ಮೊಳದ ಸ್ಥೂಲಶರೀರದಲ್ಲಿ ನಾನು ನನ್ನದು ಎಂಬ ಅಹಂಕಾರ ಮಮಕಾರಗಳು ಬಹುಕಾಲದಿಂದ ಅಭ್ಯಸ್ತಗಳಾಗಿ ದೃಢವಾಗಿರುವದರಿಂದ ಆ ಸ್ಥೂಲ ಶರೀರದ ಯಾವ ಭಾಗದಲ್ಲಿಯೇ ಆಗಲಿ ಕಂಡೂತಿ ಅಥವಾ ಮತ್ತಾವ ಚೇಷ್ಟೆಯಾಗಲಿ ಯಾರಾದರೂ ಸ್ಪರ್ಶವನ್ನೇ ಮಾಡಲಿ ಅವೆಲ್ಲ ಕ್ರಿಯೆಗಳನ್ನು ನಾವು ತಿಳಿದುಕೊಳ್ಳುವಂತೆ, ಆ ಪರಬ್ರಹ್ಮಸ್ವರೂಪಿಯಾಗಿಯೂ ನಾವೇ ಸರ್ವಾ

ಸ್ವಾತ್ಮವ್ಯಾಪ್ತೇರ್ಯಸ್ಯ ಭಾವಾಭಾವವಿಶ್ವಾತ್ಮಕ ಶಿವೋಹಮಿತಿಸ್ವಾಭಿನ್ನ ಬು ದ್ಧಿಶಕ್ತಿರೂಪಾ ನಿತ್ಯಾವೃತ್ತಿಕಾವಿರ್ಭವತಿ ತದಾತಸ್ಯ ತೇನ ಶಿವಾದ್ವೈತಜ್ಞಾ ನಾತ್ಪ್ರಾಕ್. ಅಮತಮಪಿ ಸೂಕ್ಷ್ಮವ್ಯವಹಿತ ವಿಪ್ರಕೃಷ್ಟಾದಿಸರ್ವಮಪಿ ಸ್ವಶರೀರ ಕಂಡೂತ್ಯಾದಿಕಮಿವ ಮತಂ ಸಮ್ಯಕ್ ಜ್ಞಾತಂಭವತಿ. ,,ಆತ್ಮನಿಖಲ್ವರೇದೃಷ್ಟೆ ಶ್ರುತೆಮತೆ ವಿಜ್ಞಾತೆ ಇದಂ ಸರ್ವಂ ವಿದಿತಂ,, ,,ಮಾಂ ಯೋವೇದ ಸಸರ್ವಾ ನ್‌ವೇದ,, ಇತ್ಯಾದಿಶ್ರುತೇಃ ಉಕ್ತಂಚೋಪದೇಶೇ. ಯದಿದಂದೃಶ್ಯತೆ ದೃ ಷ್ಟ್ವಾತ್ವ ಗೃಹಾನ್ ಪುತ್ರಾಂಶ್ಚ ಸಂತ್ಯಜ | ಯೇನಪಶ್ಯಸಿತಂ ಪಶ್ಯ ಯಂ ದೃಷ್ಟ್ವಾತ್ವ ಪಶ್ಯಸೇಖಿಲಂ || ಇತಿ. ಉಕ್ತಂಚ ತತ್ವಯುಕ್ತೌ. ವಿಷಯಾಧಿಪತಿರ್ಯೋಹಿಯೋ ನಜಾನಾತಿ ಪಾರ್ವತಿ | ತಸ್ಯಯೋವೇತ್ತಿತತ್ವೇನ ತೇನಜ್ಞಾತಂ ಚರಾಚರಂ ||

---

ತ್ಮಕ ಶಿವನೆಂಬುವ ಶಿವಾದ್ವೈತ ಜ್ಞಾನವುಳ್ಳವನಾಗಿಯೂ ಸಮಸ್ತ ಜಗತ್ತೂ ನನ್ನ ಶರೀರವೆಂದು ದೃಢವಾಗಿ ತಿಳಿದವನಾಗಿಯೂ, ಇರುವ ಭಕ್ತನಿಗೆ ಸರ್ವ ಪದಾರ್ಥಗಳ ಜ್ಞಾನವಾಗುತ್ತದೆ. ಅತಿ ಸೂಕ್ಷ್ಮಗಳಾಗಿಯೂ ವ್ಯವಹಿತಗಳಾಗಿಯೂ, ಅತಿ ದೂರಸ್ಥಗಳಾಗಿಯೂ ಇರುವ ಪದಾರ್ಥಗಳ ಜ್ಞಾನವಾಗುವದಲ್ಲದೆ ಅಲ್ಲಲ್ಲಿ ಏನೇನು ಸಮಾಚಾರವೆಂಬುವದೂ ಕೂಡಾ ತಿಳಿ ದುಬರುತ್ತದೆ. ಆದರೆ ಭಕ್ತನಾಗದಿದ್ದವನಿಗೆ ಮಾತ್ರ ಯಾವದೂ ತೋರುವದಿಲ್ಲಾ "ಭಕ್ತನೆಂದರೆ ದೇಹಾದಿಗಳಲ್ಲಿ ಅಭಿಮಾನವಂ ಬಿಟ್ಟು ಕೇವಲ ಜಗದ್ರೂಪನಾದ ಶಿವನಲ್ಲಿ ತನ್ನ ಅಭಿಮಾನವ ನ್ನು (ಪ್ರೀತಿಯನ್ನು) ಇಟ್ಟಿರತಕ್ಕವನೆಂದರ್ಥ ಈ ವಿಷಯದಲ್ಲಿ ತ್ಯಕ್ತಾಭಿಮಾನೋ ದೇಹಾ ದೌಭಕ್ತ ಇತ್ಯುಚ್ಯತೆ ಬುಧೈಃ | ತಚ್ಚಿತ್ತಮಚಲಂ ಯಸ್ಯಸ ವೈಮಾಹೇಶ್ವರಃ ಸ್ಮೃತಃ | ಎಂ ಬುವ ಶಿವಾಗಮೋಕ್ತಿಯಿರುವುದು. ಯಾವ ಮನುಷ್ಯನು ನಾವು ಹಿಂದೆ ಹೇಳಿದ ಪ್ರಕಾರ ತನಗೆ ಸಂಬಂಧಪಟ್ಟ ಸರ್ವವಿಷಯಗಳಲ್ಲಿ ನಿವೃತ್ತಿ ಕಲೆಯುಳ್ಳವನಾಗುವನೊ? ಅವನೇ ಭಕ್ತನು. ಆದ್ದ ರಿಂದಲೆ ಭಕ್ತಸ್ಥಲಕ್ಕೆ ನಿವೃತ್ತಿಕಲೆಯೇ ವೀರಶೈವಶಾಸ್ತ್ರದಲ್ಲಿ ಹೇಳಲ್ಪಟ್ಟದೆ. ಅರ್ಥಾತ್ ತಾನು ಭಕ್ತನಾಗಿ ವಿಶ್ವಾತ್ಮಕನಾದ ಶಿವನೇ ನಾನು ಎಂಬುವ ಅಂತಃಕರಣ ವೃತ್ತಿಯು ಶಿವನಲ್ಲಿ ಅಚಲವಾಗಲು ತಾನು ಮಾಹೇಶ್ವರನೆನಿಸಿ,, ಚಿತ್ತಶುದ್ಧಿರ್ಭವೇದ್ಯಸ್ಯಸಪ್ರಸಾದೀ ಉದಾಹೃತಃ|| ಎಂಬಂತೆ ಅಂತಃಕರಣವು ಶುದ್ಧವಾಗಲು ಪ್ರಸಾದಿಯಾಗಿ ಅನಂತರದಲ್ಲಿ "ತ್ಯಕ್ತ ಜೀವ ಭ್ರಮಶ್ಚಾಯಂ ಲಿಂಗಾತ್ಮಾ ಪ್ರಾಣಲಿಂಗಕಃ,, ಎಂಬಂತೆ ನಾನು ಸುಖಿಯು ನಾನು ದುಃಖಿ ಯು, ನಾನು ಕಿಂಚಿಜ್ಞನು, ನಾನು ಪೂರ್ಣನಲ್ಲಾ ನಾನು ಜೀವನು. ಪರಶಿವನಲ್ಲಾ ಎಂಬುವ ಜೀವಭ್ರಮವು ಲಯಹೊಂದಲಾಗಿ ಅಂದರೆ ಸೂಕ್ಷ್ಮಶರೀರದಭಿಮಾನವಡಗಿ ಪ್ರಾಣಲಿಂಗದಲ್ಲಿ ಪ್ರೀತಿಯು ಬಲಿತು ಪ್ರಾಣಲಿಂಗಿಯಾಗಿ ಅನಂತರ "ಶಿವನಿತ್ಯತ್ವ ನಿಶ್ಚಿಂತಃ ಸಾನಂದಃ ಶರಣೋಭ ವೇತ್,, ಎಂಬಂತೆ ನಾನು ಶಿವಸ್ವರೂಪನೇ ಆಗಿದ್ದೇನೆ ಶಿವನು ನಿತ್ಯನೆಂದಮೇಲೆ ನಾನೂ ನಿತ್ಯ ನು. ನನಗೆ ಜನನಮರಣಗಳಿಲ್ಲವೆಂದು ತಿಳಿದು ಅವುಗಳಿಗೋಸ್ಕರವಾಗಿ ಚಿಂತಿಸದೆ ಯಾವಾಗಲೂ

ಇತಿ. ಉಕ್ತಂಚಾನ್ಯತ್ರ, ಏಕೋಭಾವಃ ಸರ್ವಭಾವಸ್ವಭಾವಃ | ಸರ್ವೇಭಾವಾ ಏಕಭಾವಃ ಸ್ವಭಾವಾಃ || ಏಕೋಭಾವಸ್ತತ್ವತೋಯೇನ ದೃಷ್ಟಃ ಸರ್ವೇ ಭಾವಾಸ್ತತ್ವತಸ್ತೇನದೃಷ್ಟಾಃ || ಇತಿ. ಯಸ್ಯಯೇನಪ್ರಾಕ್ ಮತಮಭಿಮತಂ ಪುತ್ರಕಲತ್ರಾದಿಕಂ ಸಂಕುಚಿತಾಹಂಕಾರಾದ್ಯಾಸ್ಪದಂ ಯತ್ ವರ್ತತೇ ತತ್ಸಸ್ವೇದಸಏವ ಸರ್ವಾತ್ಮಕಃ ಶಿವೋಹಮಿತಿ ಶಿವಾದ್ವೈತಜ್ಞಾನಾನಂತರಂ ತಥಾನಜಾನಾತಿ. ಕಿಂತು ಸರ್ವಮಪಿ ಪರಾಹಂತಾವಗಾಹಿತ್ವೇನಜಾನಾತೀತ್ಯರ್ಥಃ. ಬ್ರಹ್ಮ ವಿಜ್ಞಾನತಾಂ ಸತ್ವಮಾತ್ರೇಣಾ ಸತ್ವಮಾತ್ರೇಣ ವಿದಿತವತಾಂ ತದವಿಜ್ಞಾತಂ ತಸ್ಯ ಸದಸದ್ರೂಪವತ್ವಾತ್ "ಸತ್ಯಂಚಾನೃತಂಚ" ಇತಿಶ್ರುತೇಃ ಸದಸಚ್ಚಾಹ

---

ಆನಂದಪರವಶನಾಗಿ ಶರಣನೆನಿಸಿಕೊಂಡು 'ಶಿವಜೀವೋ ಭಯಭ್ರಾಂತಿ ರಹಿತ ಕ್ಯೈಕ್ಯಮುಚ್ಯತೆ' ಎಂಬಂತೆ ಆ ಸರ್ವಾತ್ಮರ ಶಿವನೇ ನಾನು ಎಂಬ ಶಿವಾದ್ವೈತ (ಲಿಂಗಾಂಗ ಸಾಮರಸ್ಯ) ಜ್ಞಾನವು ದೃಢವಾಗಲು ದ್ವೈತ ಜ್ಞಾನವಡಗಿ ಮುಕ್ತನಾಗುವನು. ಇಂಥ ಶಿವಾದ್ವೈತಜ್ಞಾನವು ಯಾವನಿಗದೆಯೊ? ಅವನಿಗೆ ದೇಹಪಾತಾನಂತರದಲ್ಲಿ ಸರ್ವಜ್ಞತ್ವಾದಿ ಶಕ್ತಿಗಳು ಉದಯವಾಗುವವು. ಜೀವನ್ಮುಕ್ತಾವಸ್ಥೆಯಲ್ಲಿಯೂ ಕೂಡಾ ಎಲ್ಲರಿಗಿಂತಲೂ ವಿಲಕ್ಷಣಗಳಾದ ಕೆಲವು ಗುಣಗಳು ಕಂಡುಬರುವವು. ಅರ್ಥಾತ್ ಶಿವಜ್ಞಾನಿಗೆ ತನಗೆ ಪೂರ್ವದಲ್ಲಿ ತಿಳಿಯದಿದ್ದ ಸಮಸ್ತ ಪದಾರ್ಥಗಳೂ ಸೂಕ್ಷ್ಮವ್ಯವಹಿತ ವಿಪ್ರಕೃಷ್ಟ ವಸ್ತುಗಳೂ ತಿಳಿಯಲ್ಪಡುತ್ತವೆಂದು 'ಖುಸ್ಯಾಮತಂ' ಎಂಬುವ ಮಂತ್ರವು ಹೇಳುತ್ತದೆ. ಎಲ್ಲ ಕಡೆಯಲ್ಲಿಯೂ ನಾನೇ ಇದ್ದೇನೆಂದು ತನ್ನ ವ್ಯಾಪ್ತಿಯ ಅಭ್ಯಾಸವುಳ್ಳವನಾಗಿಯೂ ಲಿಂಗಾಂಗ ಸಾಮರಸ್ಯವೆಂಬ ಎರಡನೇ ಹೆಸರುಳ್ಳ ಶಿವಯೋಗದಿಂದ ಶಿವಜೀವರುಗಳ ದ್ವೈತಭ್ರಾಂತಿಯನ್ನು ಕಳೆದವನಾಗಿಯೂ ಇರುವ ಮಹಾ ಪುರುಷನಿಗೆ ಮಾತ್ರ ಸರ್ವ ಪ್ರಪಂಚರೂಪನಾದ ಶಿವನೇ ನಾನೆಂಬುವ ಶಿವನಿಗೆ ಅಭಿನ್ನವಾದ ಬುದ್ಧಿಶಕ್ತಿರೂಪವಾದ ಸತ್ವವಾದ ಶಿವಾದ್ವೈತ ಜ್ಞಾನರೂಪವಾದ ಅಂತಃಕರಣ ವೃತ್ತಿಯು ಯಾವಾಗ ಆವಿರ್ಭವಿಸುತ್ತದೆಯೊ ? ಆಗ ಆ ಶಿವಾದ್ವೈತ ಜ್ಞಾನಿಗೆ ಪೂರ್ವದಲ್ಲಿ ತನ್ನಿಂದ ತಿಳಿಯಲ್ಪಡದೆ ಇದ್ದ ಅತಿ ಸೂಕ್ಷ್ಮಗಳಾಗಿಯೂ, ಅತಿದೂರದಲ್ಲಿರುವವುಗಳಾಗಿಯೂ ಇರುವ ಪದಾರ್ಥಗಳ ಜ್ಞಾನವಾಗುವದಲ್ಲದೆ ತನಗೆ ವ್ಯಹಿತಗಳಾದ ಪದಾರ್ಥಗಳ ಜ್ಞಾನವೂ ಕೂಡಾ ಆಗುತ್ತದೆ. ಅಂದರೆ ಪುರುಷನು ತನ್ನ ಶರೀರದ ಕಂಡೂತಿ (ನವೆ) ಮೊದಲಾದದ್ದನ್ನು ಹ್ಯಾಗೆ ತಿಳಿಯುವನೊ? ಹಾಗೆ ಪರಶಿವ ಬ್ರಹ್ಮಸ್ವರೂಪಿಯಾದ ಶಿವಜ್ಞಾನಿಯು ಸರ್ವಜಗತ್ತಿನ ಚೇಷ್ಟೆಯನ್ನು ತಿಳಿಯುತ್ತಾನೆಂಬುವ ವಿಷಯದಲ್ಲಿ "ನರಃ, ಸ್ವದೇಹ, ಕಂಡೂತಿಂ, ವಿಜಾನಾತಿ, ಯಥಾತಥಾ, ಪರಬ್ರಹ್ಮಸ್ವರೂಪೀಚವೇತ್ತಿ ವಿಶ್ವವಿಚೇಷ್ಟಿತಂ,, ಎಂದು ಶಿವಯೋಗಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ ಯಲ್ಲದೆ ಶ್ರುತಿಯೂ ಕೂಡಾ "ಆತ್ಮನಿಖಲ್ವರೆ ದೃಷ್ಟೆ ಶ್ರುತಿ ಮತೆವಿಜ್ಞಾತೆ ಇದಂಸರ್ವಂ ವಿದಿತಂ" ಅಂದರೆ ಪರಮಾತ್ಮನ ಜ್ಞಾನವಾಗಲು ಈ ಸಮಸ್ತ ಪ್ರಪಂಚವೂ ತಿಳಿಯಲ್ಪಡುತ್ತ ಎಂದು ಹೇ

ಮರ್ಜುನೇತಿ ಸ್ಮೃತೇಶ್ಚ. ಅವಿಜಾನತಾಂ ತದ್ಬ್ರಹ್ಮಸತ್ತಯಾ ಅಸತ್ತಯಾವಾ ಅವಿದಿತವತಾಂ ವಿಜ್ಞಾತಂ ವಿದಿತಂ ಸತ್ವಾಸತ್ವಾಭ್ಯಾಂ ತದ್‌ಜ್ಞಾನಾವಿರ್ಭಾವಾತ್ | ನನುಸತ್ವಾಸತ್ವೋಭಯರೂಪೇಣ ತಜ್ಞಾನಸ್ಯಸ್ವೀಕಾರೆ "ಭಾವಗ್ರಾಹ್ಯ" ಮಿತ್ಯಾದಿಶ್ವೇತಾಶ್ವತರಶ್ರುತಿ ವಿರೋಧಃ ಸ್ಯಾದಿತಿ ಚೇನ್ನ.. ಭಾವಗ್ರಾಹ್ಯಮಿತ್ಯತ್ರಭಾವಪದಸ್ಯ ಸದಸದ್ವಿಶ್ವಾತ್ಮಕ ಶಿವೋಹಮಿತಿ ಪರಾಹಂತಾವಗಾಹಿ ನಿತ್ಯಶುದ್ಧ ಚಾದ್ಧಶಕ್ತಿರೂಪವೃತ್ತಿಪರತ್ವಾತ್,. ನಚಾಸ್ತೀತ್ಯೇವೋಪಲಬ್ಧವ್ಯಃ ಇತಿ ಶ್ರುತೇರಸುರೋಧಾತ್ ಭಾವಪದಸ್ಯ ಸತ್ತಾಪರತ್ವಂ ಯುಕ್ತಮಿತಿ

---

ಳುತ್ತದೆ. ಮತ್ತು ನನ್ನನ್ನು ಯಾವನು ತಿಳದಿರುವನೋ ಅವನು ಸಮಸ್ತ ದೇವತೆಗಳನ್ನೂ ತಿಳಿದವನು ಎಂದು ಅಥರ್ವ ಶ್ರುತಿಯೂ ಹೇಳುತ್ತದೆ. ಮತ್ತು ಇಷ್ಟೋಪದೇಶವೆಂಬ ಗ್ರಂಥದಲ್ಲಿ— ಮನೆ ಹೊಲ ಪುತ್ರ ಕಲತ್ರ ಮೊದಲಾದ ಅಸ್ಥಿರ ಪದಾರ್ಥಗಳನ್ನು ನಿನ್ನೊಳಗಿರುವ ಯಾವ ವಸ್ತುವಿನಿಂದ ನೋಡುತ್ತಿರುವಿಯೋ ಅಂಥಾ ಅಂತರ್ಯಾಮಿಯಾದ ಪರಮಾತ್ಮನೊಬ್ಬನನ್ನೇ ನೋಡು. ಆ ನನ್ನ ಮನೆ, ನನ್ನ ಹೊಲ, ನನ್ನ ಹೆಂಡರು, ನನ್ನ ಮಕ್ಕಳುಗಳು ಎಂದು ಹಂಬಲಿಸುತ್ತಾ ಅವುಗಳನ್ನೇ ನೋಡಬೇಡ. ಮನೆ ಹೊಲ ಹೆಂಡರು ಮಕ್ಕಳ ಅಭಿಮಾನವನ್ನು ಬಿಟ್ಟುಬಿಡು. ಆ ಅಭಿಮಾನವನ್ನು ಬಿಟ್ಟು ಕೇವಲ ಪರಶಿವಮೂರ್ತಿಯನ್ನೇ ನೀನು ನೋಡಿದೆಯಾದರೆ ಸಾಕು, ಎಲ್ಲವನ್ನೂ ನೋಡಿ ಬಿಟ್ಟಂತಾಗುವದು, ಎಂದು ಹೇಳಲ್ಪಟ್ಟದೆ. ಮತ್ತು ಎಲೈ ಪಾರ್ವತೀದೇವಿಯೆ ! ವಿಷಯಗಳಿಗೆ ಅಧಿಪತಿಯಾಗಿರುವ ಯಾವನು ಯಾವನಿಂದ ಆ ವಿಷಯಗಳನ್ನು ತಿಳಿಯುತ್ತಾನೆಯೊ ಅಂಥ ಪರಶಿವ ಬ್ರಹ್ಮವನ್ನು ಯಾವನು ಯಥಾರ್ಥವಾಗಿ ತಿಳಿಯುತ್ತಾನೆಯೋ ಅವನು ಸಮಸ್ತ ಚರಾಚರ ಪ್ರಪಂಚವನ್ನು ತಿಳಿಯುತ್ತಾನೆ ಎಂದು ತತ್ವಯುಕ್ತಿಎಂಬ ಗ್ರಂಥವೂ ಕೂಡ ಹೇಳುತ್ತದಲ್ಲದೆ, ಒಂದೇ ವಸ್ತು ಸರ್ವ ವಸ್ತುಗಳ ಸ್ವರೂಪವು ಆ ಸಮಸ್ತ ಪದಾರ್ಥಗಳು ಒಂದು ಪದಾರ್ಥದ ಸ್ವರೂಪಗಳು. ಒಂದು ವಸ್ತುವನ್ನು ಯಾವನು ತತ್ವತಃ ತಿಳಿಯುತ್ತಾನೆಯೋ ಅವನು ಸಮಸ್ತ ಪದಾರ್ಥಗಳನ್ನೂ ತತ್ವತಃ ತಿಳಿಯುತ್ತಾನೆಂದೂ ಹೇಳುವ ಪ್ರಮಾಣಗಳಿಂದ ಶಿವಾದ್ವೈತಜ್ಞಾನವಾದರೆ ಸಮಸ್ತ ಜಗತ್ತಿನ ಜ್ಞಾನವಾಗುತ್ತದೆಂದು ತಿಳಿದುಬರುವಕಾರಣ, ಶಿವಾದ್ವೈತಜ್ಞಾನಕ್ಕಿಂತ ಮೊದಲು ಅಮತವಾದ (ತಿಳಿಯಲ್ಪಡದೆಇದ್ದ) ಪದಾರ್ಥಗಳು ಮತವಾಗುವದು. (ಶಿವಾದ್ವೈತಜ್ಞಾನವಾದಮೇಲೆ ತಿಳಿಯಲ್ಪಡುವದೆಂದು) ಶ್ರುತಿ ದೇವಿಯು ಚನ್ನಾಗಿ ನಿರೂಪಿಸಿರುವಳು. ಶಿವಾದ್ವೈತಜ್ಞಾನವಾಗುವದಕ್ಕಿಂತಲೂ ಹೆಂಡರು ಮಕ್ಕಳು ನನ್ನವರು ಎಂದೂ, ದೇಹವೇ ನಾನು ಎಂದೂ ಅಭಿಮಾನವಿಟ್ಟು, ಅವುಗಳ ಸುಖ ದುಃಖಾದಿಗಳು ತನ್ನವೇ ಎಂದು ಹಂಬಲಿಸುವವನಾಗಿರುವ ಮನುಷ್ಯನಿಗೆ ಶಿವಾದ್ವೈತಜ್ಞಾನವಾಗಲು ಆ ಹೆಂಡರು ಮಕ್ಕಳು ಮುಂತಾದವುಗಳನ್ನು ಆ ಪ್ರಕಾರವಾಗಿ ತಿಳಿಯದೇ ಸರ್ವ ಪ್ರಪಂಚವನ್ನೂ ನಾನು ನನ್ನದು ಎಂದು ತಿಳಿದು ನಿಶ್ಚಿಂತವಾಗಿ ಸುಖಿಯಾಗುವನು.

ವಾಚ್ಯಂ ಅಗ್ರಿಮಭಾವಾಭಾವಕರಮಿತ್ಯಸ್ಯ ವಿರೋಧಾತ್ ಭಾವಾಭಾವಪ್ರಪಂಚಕರಸ್ಯ ಶಿವಸ್ಯ ಭಾವಾಭಾವಯೋರಭ್ಯುಪಗಮಾತ್ | "ನನ್ವಸ್ತೀತ್ಯೇವೋಪಲಬ್ಧವ್ಯಃ" ಸತ್ವೇತರಸತ್ವ ವ್ಯವಚ್ಛೇದಾಪಗಮಾತ್ ತದ್ ಜ್ಞಾನಸ್ಯ ಸತ್ವಮಾತ್ರಾವಚ್ಛಿನ್ನ ವಿಷಯತಾಕತ್ವಸ್ಯೈವ ಸ್ವೀಕಾರ್ಯತ್ವಾತ್ ಕಥಂ ಸತ್ವಾಸತ್ವಗ್ರಾಹ್ಯತ್ವಂ ಪರಶಿವಸ್ಯಬ್ರಹ್ಮಣಃ| ಇತಿಚೇನ್ನ' ತಸ್ಯಸತ್ವೇನೈವಗ್ರಾಹ್ಯತ್ವೇ. 'ಸತ್ಯಂಜ್ಞಾನಮನಂತಂಬ್ರಹ್ಮ ಯೋವೇದನಿಹಿತಂ ಗುಹಾಯಾಂ ಪರಮೇವ್ಯೋಮನ್ ಸೋಶ್ನುತೆ ಸರ್ವಾನ್ ಕಾಮಾನ್ ಸಹವಿಪಶ್ಚಿತಾ | ಇತಿ ಶ್ರುತಿವಿರೋಧಃಸ್ಯಾತ್ | ತತ್ರಕಥಂ ವಿದ್ಯಾತ್ಕುತ್ರಕಿಂಫಲಂ ಇತ್ಯಾಕಾಂಕ್ಷಾ ಶಾಂತ್ಯರ್ಥಂಹಿ ಏತದ್ವಾಕ್ಯಂ. ತಥಾಚಾತ್ರ ಸತ್ಯತ್ವೇನ ಆತ್ಮತ್ವೇನ ಸರ್ವಾತ್ಮಕತ್ವೇನ ಬ್ರಹ್ಮವಿದ್ಯಾ

---

ಯಾರು ಬ್ರಹ್ಮವನ್ನು ಕೇವಲ ಸದ್ರೂಪವೆಂದು ತಿಳಿಯುತ್ತಾರೆಯೊ? ಅಥವಾ ಕೇವಲ ಅಸದ್ರೂಪವೇ ಬ್ರಹ್ಮವೆಂದು ತಿಳಿಯುತ್ತಾರೆಯೊ? ಅವರಿಂದ ಬ್ರಹ್ಮವು ತಿಳಿಯಲ್ಪಟ್ಟಲ್ಲವೆಂದು ತಿಳಿಯತಕ್ಕದ್ದು. ಯಾಕಂದರೆ ಬ್ರಹ್ಮವು ಕೇವಲ ಸದ್ರೂಪವೂ ಅಲ್ಲ, ಕೇವಲ ಅಸದ್ರೂಪವೂ ಅಲ್ಲ. ಸದಸದ್ರೂಪವಾಗಿರುವದಷ್ಟೆ? "ಸತ್ಯಂಚಾನೃತಂಚ, (ಬ್ರಹ್ಮವು ಸದಸದ್ರೂಪವಾಗಿದೆ) ಎಂಬ ಶ್ರುತಿಯೂ, "ಸದಸಚ್ಚಾಹಮರ್ಜುನ' (ಎಲೈ ಅರ್ಜುನ! ನಾನು ಸದಸದ್ರೂಪನಾಗಿರುವೆನು) ಎಂಬ ಕೃಷ್ಣಗೀತೆಯೂ ಕೂಡ ಬ್ರಹ್ಮವು ಸದಸದ್ರೂಪವೆಂದು ಹೇಳುತ್ತದೆ. ಮತ್ತು ಆ ಬ್ರಹ್ಮವನ್ನು ಒಂದೇ ಸದ್ರೂಪದಿಂದಾಗಲಿ ಒಂದೇ ಅಸದ್ರೂಪದಿಂದಾಗಲಿ ತಿಳಿಯದಿದ್ದವರಿಂದ ಆ ಬ್ರಹ್ಮವು ತಿಳಿಯಲ್ಪಟ್ಟದೆ ಎಂದು ತಿಳಿಯತಕ್ಕದ್ದು. ಯಾಕಂದರೆ ಸದ್ರೂಪ ಮತ್ತು ಅಸದ್ರೂಪ ಇವೆರಡರಿಂದ ಆ ಸರ್ವರೂಪವಾದ ಬ್ರಹ್ಮದ ಜ್ಞಾನವು ಆಗಿಯೇ ಆಗುತ್ತದೆ. ಆದುದರಿಂದ ಯಾವನು ಸದ್ರೂಪ ಒಂದರಿಂದಲೇ ತಿಳಿದೆನೆನ್ನುವನೋ ಅಥವಾ ಅಸದ್ರೂಪ ಒಂದರಿಂದಲೇ ತಿಳಿದೆನೆನ್ನುವನೋ ಅವನು ಬ್ರಹ್ಮಜ್ಞಾನಿಯೇ ಅಲ್ಲ. ಯಾವನು ಒಂದೇ ಸದ್ರೂಪದಿಂದಲೂ ಒಂದೇ ಅಸದ್ರೂಪದಿಂದಲೂ ನಾನು ಬ್ರಹ್ಮವನ್ನು ತಿಳಿಯಲಿಲ್ಲವೆನ್ನುವನೋ ಅವನಿಗೆ ಬ್ರಹ್ಮಜ್ಞಾನಿಯನ್ನಬೇಕೆಂದು ಶ್ರುತಿಯು ಚಮತ್ಕಾರದಿಂದ ಹೇಳಿರುವದು. ಎಲೈ ಶಿವಾದ್ವೈತಿಯೆ! ಸದಸತ್ಸರ್ವರೂಪದಿಂದ ಬ್ರಹ್ಮವನ್ನು ತಿಳಿಯತಕ್ಕದೆಂದು ನೀನು ಈ ಶ್ರುತ್ಯರ್ಥವನ್ನು ಮಾಡಿದ ಪಕ್ಷದಲ್ಲಿ "ಭಾವಗ್ರಾಹ್ಯಂ, (ಬ್ರಹ್ಮವು ಸದ್ರೂಪದಿಂದ ಗ್ರಹಿಸಲು ಯೋಗ್ಯವಾಗಿದೆ) ಎಂದು ಹೇಳುವ ಶ್ವೇತಾಶ್ವತರ ಶ್ರುತಿಗೆ ಗತಿ ಏನು? ಅಂದರೆ ಬ್ರಹ್ಮಾದ್ವೈತಿಯೆ! ಭಾವಗ್ರಾಹ್ಯವೆಂಬಲ್ಲಿ ಭಾವಪದಕ್ಕೆ ಸದ್ರೂಪವೆಂದು ಮೊದಲು ಅರ್ಥಮಾಡಿ ಅಥವಾ ಎಂದು ಭಾವಶಬ್ದಕ್ಕೆ ವಿಶುದ್ಧಚಿತ್ತವೆಂದು ಅರ್ಥಮಾಡಿಲ್ಲವೆ? ವಿಶುದ್ಧಚಿತ್ತವೆಂದು ಭಾವಶಬ್ದಕ್ಕೆ ಅರ್ಥಮಾಡಿದರೆ "ಭಾವಗ್ರಾಹ್ಯಂ" ಎಂಬ ಶ್ವೇತಾಶ್ವತರ ಶ್ರುತಿಯು ಸಂಗತವಾಗುತ್ತದೆ ಯಾಕಂದರೆ ಸದಸತ್ಪ್ರಪಂಚರೂಪ ಶಿವನೇ ನಾನು ಎಂಬುವ ಅಂಶಕರ

ದಿತಿಜ್ಞಾಯತೆ ತಸ್ಯಸತ್ವೈಕರೂಪೇಣ ಜ್ಞಾಯಮಾನತ್ವೇ ತನ್ನಸ್ಯಾತ್ ನಹಿ ‘‘ಅಸನ್ನೇವಸಭವತಿ ಅಸದ್ಬ್ರಹ್ಮೇತಿ ವೇದಚೇತ್ ಇತ್ಯನೇನೋಕ್ತಾತಚನಿಂದಾ ತಸ್ಯಾಯಸತ್ವೇನ ಜ್ಞಾನಸ್ವೀಕಾರೆ. ಸ್ಯಾದಿತಿವಾಚ್ಯಂ. ತಸ್ಯಾ ಅಸತ್ವೈಕ ಧರ್ಮಾ ವಗಾಹಿ ಬ್ರಹ್ಮಜ್ಞಾನವದ್ವಿಷಯಕತ್ವಾತ್. ಸದಸತ್ಸರ್ವಾತ್ಮತ್ವೇನ ತದ್‌ಜ್ಞಾ ನಸ್ವೀಕಾರೆ ನ ಕುತ್ರಚಿನ್ನಿಂದಾಶ್ರೂಯತೆ. ಅನ್ಯಥಾಸರ್ವೋವೈರುದ್ರಃ’’ ಸರ್ವಂ ಖಲ್ವಿದಂಬ್ರಹ್ಮ ತಜ್ಜಲಾನಿಶಾಂತಉಪಾಸೀತ ಇತ್ಯಾದಿಶ್ರುತಿವಿರೋಧ ಆಪ ದ್ಯೇತ. ನನುಕಿಮಿದಮುಕ್ತಂ ಅಸತ್ವಂನಾಮ. ಮಿಥ್ಯಾತ್ವಂ ತಚ್ಚ ತ್ರೈಕಾಲಿ ಕನಿಷೇಧಪ್ರತಿಯೋಗಿತ್ವಂ | ಸತ್ವಂನಾಮ. ತ್ರೈಕಾಲಿಕ ನಿಷೇಧಾಪ್ರತಿಯೋಗಿ ತ್ವಂ, ಕಥಮನಯೋರ್ಗೋತ್ವ ಗೋತ್ವಾಭಾವಯೋರಿವಸ್ಥಿತಯೋರೇಕತ್ರಸ ಮಾವೇಶಂಬ್ರವೀಷಿ | ತತ್ಸಮಾವೇಶೇಚ ತದುಭಯರೂಪೇಣ ಬ್ರಹ್ಮಜ್ಞಾನಂ

---

ಇದ ಚಿತ್ತಶುದ್ಧವಾದ ವೃತ್ತಿಯೇ ಭಾವವೆಂದು ಶ್ರೀಮನ್ನೀಲಕಂಠ ಭಗವತ್ಪಾದ ಮೊದಲಾದ ಶಿವಾಚಾರ್ಯರು ಹೇಳಿರುವರು. ಅಲ್ಲದೆ ಶ್ವೇತಾಶ್ವತರೋಪನಿಷತ್ತಿಗೆ ಹೊಸದಾಗಿ ಭಾಷ್ಯವ ನ್ನು ಬರೆದ ಭೀಮಶೈವಾಚಾರ್ಯರೂ ಕೂಡಾ ಭಾವವೆಂದರೆ ವಿಶುದ್ಧಚಿತ್ತವೆಂದು ಅರ್ಥಮಾಡಿ ರುವರು. ಎಲ್ಲೈ ಶಿವಾದ್ವೈತಿಯೆ! ‘‘ಅಸ್ತೀತ್ಯೇವೋಪಲಬ್ಧವ್ಯಃ’’ (ಆ ಬ್ರಹ್ಮವು ಅಸ್ತಿತ್ವ ಧರ್ಮದಿಂದಲೇ ತಿಳಿಯಲು ಯೋಗ್ಯವಾಗಿದೆ) ಎಂಬ ಛಾಂದೋಗ್ಯ ಶ್ರುತಿಗನುಸಾರವಾಗಿ, ಕೇವಲ ಸದ್ರೂಪದಿಂದಲೇ ಬ್ರಹ್ಮವನ್ನು ತಿಳಿಯತಕ್ಕದ್ದುಚಿತವಲ್ಲವೆ? ಮತ್ತು ಈ ಛಾಂದೋ ಗ್ಯಶ್ರುತಿಯಂತೆ ಭಾವಪದಕ್ಕೆ ಸದ್ರೂಪವೆಂದು ಯಾಕೆ ಅರ್ಥ ಮಾಡಬಾರದು. ಅಂದರೆ ಅದೇ ಶ್ವೇತಾಶ್ವತರ ಶ್ರುತಿಯಲ್ಲಿ ಮುಂದೆ ‘‘ಭಾವಾಭಾವಕರಂ’’ (ಸದಸದ್ರೂಪವಾದ ಪ್ರಪಂಚವ ನ್ನು ಮಾಡುವವನನ್ನು) ಎಂದು ಹೇಳುವ ವಾಕ್ಯಕ್ಕೆ ವಿರುದ್ಧವಾಗುತ್ತದೆ. ಯಾಕಂದರೆ ಭಾವಾ ಭಾವ ಪ್ರಪಂಚಕ್ಕೆ ಕಾರಣನಾದ ಶಿವನು ಭಾವಾಭಾವ ಪ್ರಪಂಚ ಸ್ವರೂಪನೇ ಇರಬೇಕಾಗು ತ್ತದಲ್ಲವೆ? ಕಾರ್ಯಕಾರಣಗಳಿಗೆ ಅಭೇದವಿರುವದರಿಂದ ಕಾರಣನಾದ ಶಿವನು ಕಾರ್ಯವಾದ ಭಾವಾಭಾವ ಪ್ರಪಂಚಸ್ವರೂಪನಾಗುವನು. ಭಾವಗ್ರಾಹ್ಯವೆಂಬಲ್ಲಿ ಭಾವಪದಕ್ಕೆ ಸತ್ತಾ ಎಂದು ಅರ್ಥ ಮಾಡಿದರೆ ಮುಂದಣ ಭಾವಾಭಾವಕರಂ ಎಂಬುದಕ್ಕೆ ಸಂಗತಿಯಾಗುವದಿಲ್ಲವಾ ದಕಾರಣ, ಭಾವವೆಂದರೆ ವಿಶುದ್ಧಚಿತ್ತವೆಂದೂ, ಆ ಚಿತ್ತವಾದ ಶಿವಾಕಾರವೃತ್ತಿಗೆ ವಿಷಯನೆಂ ದೂ ಹೇಳುತ್ತೇವೆ. ‘‘ಅಸ್ತೀತ್ಯೇವೋಪಲಬ್ಧವ್ಯಃ’’ ಎಂಬ ಛಾಂದೋಗ್ಯಶ್ರುತಿಯಲ್ಲಿರುವ ಏವ ಎಂಬ ಶಬ್ದದಿಂದ ಸದ್ರೂಪದಿಂದಲೇ ಶಿವನನ್ನು ತಿಳಿಯತಕ್ಕುದೆಂದೂ, ಸದ್ರೂಪಕ್ಕೆ ಇತರವಾದ ಧರ್ಮದಿಂದ ತಿಳಿಯತಕ್ಕದ್ದಲ್ಲವೆಂದೂ ತಿಳಿಯುತ್ತದಲ್ಲಾ? ಅಂದರೆ, ಅಲ್ಲಿರುವ ಏವ ಎಂಬ ಶಬ್ದದಿಂದ ಸದ್ರೂಪಕ್ಕೆ ಭಿನ್ನವಾದ ಧರ್ಮದಿಂದ ತಿಳಿಯತಕ್ಕದ್ದು ಬ್ರಹ್ಮವಲ್ಲೆಂದು ಅರ್ಥ ಮಾ ಡಬಾರದು. ಆದರೆ ಕೇವಲ ಶೂನ್ಯವೆ ಬ್ರಹ್ಮವೆಂದು ತಿಳಿಯಬಾರದೆಂಬರ್ಥವು. ಹೀಗೆ ಅರ್ಥ

ಸ್ಯಾತ್ | ಇತಿ ಚೇತ್ತ್ವಮುಸವಗಚ್ಛಸಿ ಶಿವಾದ್ವೈತಸಿದ್ಧಾಂತರಹಸ್ಯಂ ಅಚಿಂತ್ಯಶಕ್ತಿಕೆ ಪರಮಶಿವೆ ಕಿನ್ನಸಮಾವಿಶತಿ ಸತ್ವಾಸತ್ವಯೊರವಿರೋದಶ್ಚ ಪೂರ್ವಮುಕ್ತ ಏವ | ಕಿಂಚಾಸತ್ವಂನಾಮ ಸತ್ರೈಕಾಲಿಕನಿಷೇಧಪ್ರತಿಯೋಗಿತ್ವಂ | ತಸ್ಯಾಪ್ರಸಿದ್ಧತ್ವಾತ್ | ನಹಿಘಟಕಾಲೆ. ಮೃದಿಘಟೋನಾಸ್ತೀತಿ ನಿಷೇಧಃ ಸಂಭವತಿ ನಹಿಚ ಪ್ರಪಂಚಕಾಲೆ ಬ್ರಹ್ಮಣಿ ತನ್ನಿಷೇಧಃ | ನೇಹನಾನಾಸ್ತಿಕಿಂಚನ" ವಾಚಾರಂಭಣಂ ವಿಕಾರೊ ನಾಮಧೇಯಂ ಮೃತ್ತಿಕೇತ್ಯೆವಸತ್ಯಂ" ಇತ್ಯಾದಿನಾ ಕಾರ್ಯಕಾರಣಯೋರಭಿನ್ನತ್ವಮುಚ್ಯತೆ. ನತುತ್ವದಭಿಮತಮಸೃತತ್ವಂ | ತಸ್ಮಾದನೃತತ್ವಂ ನಾಮ ಸ್ವಾಸಮಾನಕಾಲವೃತ್ಯಭಾವಪ್ರತಿಯೋಗಿತ್ವಮಿತಿವಕ್ತವ್ಯಂ. ತಚ್ಚಪ್ರಪಂಚೋತ್ಪತ್ತೇಃ ಪ್ರಾಕ್ ಪ್ರಪಂಚಸ್ಯ ಕಾರ್ಯಸ್ವರೂಪತಾತ್ಯಾಗಕಾಲೇಚ ಬ್ರಹ್ಮಣಿ ಪ್ರಪಂಚೋನಾಸ್ತೀತಿ ಸ್ವಾಸಮಾನಕಾಲವೃತ್ತ್ಯಭಾ

---

ಮಾಡದೆ ಇದ್ದರೆ "ಸತ್ಯಂ ಜ್ಞಾನಮನಂತಂ ಯೋವೇದನಿಹಿತಂಗುಹಾಯಾಂ ಪರಮೆ ವ್ಯೋಮನ್ ಸೋಶ್ನುತೆ ಸರ್ವಾನ್ ಕಾಮಾನ್ ಬ್ರಹ್ಮಣಾವಿಪಶ್ಚಿತಾ" ಎಂಬುವ ಶ್ರುತಿಗೆ ವಿರುದ್ಧವಾಗುತ್ತದೆ. ಯಾಕಂದರೆ ಈ ಶ್ರುತಿಯಲ್ಲಿ ಆ ಬ್ರಹ್ಮವನ್ನು ಹೇಗೆ ತಿಳಿಯಬೇಕು ಎಲ್ಲಿ ತಿಳಿಯಬೇಕು ಅದನ್ನು ತಿಳಿದರೆ ಫಲವೇನು ? ಎಂಬ ಪ್ರಶ್ನೆಗೆ ಸಮಾಧಾನವು (ಉತ್ತರವು) ಹೇಳಲ್ಪಡುತ್ತದೆ "ಸತ್ಯಂ ಜ್ಞಾನಮನಂತಂ" ಎಂಬ ಮೂರು ಪದಗಳಿಂದ ಆ ಬ್ರಹ್ಮವನು ಸದ್ರೂಪದಿಂದಲೂ ಚಿದ್ರೂಪದಿಂದಲೂ ಸರ್ವಾತ್ಮತ್ವದಿಂದಲೂ (ಸದಸದ್ರೂಪದಿಂದಲೂ) ತಿಳಿಯತಕ್ಕದ್ದೆಂದು ಅರ್ಥವಾಗುತ್ತದೆ. ಆದರೆ "ಅಸ್ತೀತ್ಯೇವೋಪಲಬ್ಧವ್ಯಃ" ಎಂಬುವ ಶ್ರುತಿಯಲ್ಲಿರುವ ಏವ ಎಂಬ ಪದದಿಂದ ಸದ್ರೂಪವೊಂದರಿಂದಲೇ ತಿಳಿಯಬೇಕೆಂದು ಅರ್ಥಮಾಡಿದರೆ ಆ ಮೂರು ಪದಗಳಿಗೆ ಗತಿ ಏನು? ಹಾಗಾದರೆ "ಅಸನ್ನೇವಸಭವತಿ ಅಸದ್ಬ್ರಹ್ಮೇತಿ ವೇದಚೇತ್" (ಯಾವನು ಬ್ರಹ್ಮವನ್ನು ಅಸದ್ರೂಪದಿಂದ ತಿಳಿಯುವನೋ ಅವನು ಅಸತ್ಪುರುಷಾರ್ಥವನ್ನು ಹೊಂದುತ್ತಾನೆ) ಎಂಬುವ ಶ್ರುತಿಯಿಂದ ಹೇಳಲ್ಪಡುವ ನಿಂದೆಗೆ ಯೋಗ್ಯರಾರು ಅಂದರೆ. ಬ್ರಹ್ಮವು ಕೇವಲ ಶೂನ್ಯವೇ! (ಅಸದ್ರೂಪವೆ) ಎಂದು ಯಾರು ಹೇಳುವರೋ ಅವರೇ ನಿಂದೆಗೆ ಯೋಗ್ಯರು. ವೀರಶೈವರಾದರೋ ಕಾರಣಕಾರ್ಯರೂಪಗಳಾದ ಸದಸತ್ತುಗಳನ್ನು ಹೇಳುವರು. ಇವರು ಕೇವಲ ಸದ್ವಾದವನ್ನೇ ಅಂಗೀಕರಿಸಿರುವರಾದಕಾರಣ ಇವರಿಗೆ ಯಾವ ಶ್ರುತಿಯಿಂದಲೂ ನಿಂದೆಯು ಹೇಳಲ್ಪಡುವದಿಲ್ಲ. ಆದಕಾರಣದಿಂದ, "ಅಸ್ತೀತ್ಯೇವ" ಎಂಬಲ್ಲಿ ಸದ್ರೂಪ ಒಂದರಿಂದಲೇ ಬ್ರಹ್ಮವನ್ನು ತಿಳಿಯಬೇಕೆಂದು ಅರ್ಥ ಮಾಡಬಾರದು. ಸದಸತ್ಸರ್ವರೂಪದಿಂದ ತಿಳಿಯತಕ್ಕದ್ದೇ ಶ್ರುತಿಸಮ್ಮತವು ಆದ್ದರಿಂದಲೇ "ಸರ್ವೋವೈರುದ್ರಃ" "ಸರ್ವಂಖಲ್ವಿದಂಬ್ರಹ್ಮ" (ಸದಸದ್ರೂಪ ಸರ್ವಪ್ರಪಂಚವೂ ರುದ್ರಸ್ವರೂಪವಾಗಿದೆ. ಈ ಕಾಣುವ ಜಗತ್ತೆಲ್ಲವೂ ಬ್ರಹ್ಮವೇ ಆಗಿದೆ) ಎಂಬುವ ಶ್ರುತಿಗಳು ಸಂಗತಗಳಾಗುವವು. ಆದ್ದರಿಂದ ಬ್ರಹ್ಮವು ಸದಸದ್ರೂಪವೆಂದೇ ನಾನು

ವಪ್ರತಿಯೋಗಿತ್ವ ರೂಪಮಸ್ಯತತ್ವಂ ಪ್ರಪಂಚೇವರ್ತತೇಯಥಾ ಘಟೋತ್ಪತ್ತೇಃ ಪ್ರಾಕ್ ಮುದ್ಗರಪ್ರಹಾರಾದಿನಾ ಘಟಸ್ಯಕಾರ್ಯಸ್ವರೂಪತಾ ತ್ಯಾಗಕಾಲೇಚ ಮೃದಿಘಟೋನಾಸ್ತೀತಿ ಘಟಾಸಮಾನಕಾಲವೃತ್ತ್ಯಭಾವಪ್ರತಿಯೋಗಿತ್ವಂ ಘಟೇ ಶಸ್ಮಾದ್ಘಟಕಾರ್ಯಮಸತ್ ಕಾರಣಂತು ಮೃತ್‌ಸ್ವರೂಪಂ ನಜಹಾತೀತಿಕಾರಣಂ ಸತ್ | ಏಕಂಹಿವಸ್ತುಕಾರ್ಯರೂಪೇಣ ಕಾರಣರೂಪೇ ನಿಶ್ಚಿತಂ | ಸದ್ರೂಪಂ ದ್ವಿವಿಧಮನಾಪೇಕ್ಷಿಕಂ ಸಾಪೇಕ್ಷಿಕಂಚ ಮೃದಾದಿ ಸದ್ರೂಪವತ್ ಸಾಪೇಕ್ಷಿಕಂ ಬ್ರಹ್ಮಣಸ್ತು. ಅನಾಪೇಕ್ಷಿಕಂ ತಸ್ಯ ಸದಾ ಸತ್ವಾತ್ ತಥಾಚ. ಅವಿಜ್ಞಾತಂ ವಿಜಾನತಾಮಿತ್ಯಾದಿನಾ ಕಾರಣಕಾರ್ಯರೂಪೇಣ ತತ್ಪರಂ ಬ್ರಹ್ಮ

---

ಹೇಳುತ್ತೇನೆ. ಒಳ್ಳೇದು ಶಿವಾದ್ವೈತಿಯೆ! ಅಸತ್ಯವೆಂದರೆ ಯಾವದು ಭೂತ ಭವಿಷ್ಯದ್ವರ್ತಮಾನಕಾಲಗಳಲ್ಲಿ ಲ್ಲವೋ ಅದುವೇ ಅಸತ್ಯವು. ಈ ಮೂರೂ ಕಾಲಗಳಲ್ಲಿ ಯಾವದು ಅದೆಯೋ ಅದುವೇ ಸತ್ಯವು. ಅಂದಮೇಲೆ ಈ ಸತ್ಯತ್ವ ಅಸತ್ಯತ್ವಗಳು ಒಂದು ಬ್ರಹ್ಮದಲ್ಲಿರುತ್ತವೆನ್ನುವದು ಗೋತ್ವ ಗೋತ್ವಾಭಾವಗಳನ್ನು ಒಂದು ಗೋವಿನಲ್ಲಿ ಹೇಳಿದಂತೆ ಆಗುವದಿಲ್ಲವೆ? ಅಂದರೆ ಸತ್ವಾಸತ್ವಗಳಿಗೆ ವಿರೋಧವಿಲ್ಲೆಂದು ಹಿಂದೆ ಹೇಳಿದ್ದೇವೆ. ಆದರೂ ಅಚಿಂತ್ಯಶಕ್ತಿಯುಳ್ಳ ಶಿವನಲ್ಲಿ ಯಾವ ಧರ್ಮಗಳೂ ಸಮಾವೇಶವಾಗುವದಿಲ್ಲಾ. ಕಾರಣಾವಸ್ಥೆಯಲ್ಲಿ ಸತ್ಯತ್ವ ಧರ್ಮವೂ ಕಾರ್ಯಾವಸ್ಥೆಯಲ್ಲಿ ಅಸತ್ಯತ್ವ ಧರ್ಮವೂ ಅವನಲ್ಲಿ ಸಂಭವಿಸುತ್ತದೆ. ಆದ್ದರಿಂದ ಎಲೈ ಬ್ರಹ್ಮಾದ್ವೈತಿಯೆ! ಅಸತ್ಯತ್ವವೆಂದರೆ ನೀನು ಮಾಡಿದ ಅರ್ಥವು ಸಂಗತವಾಗುವದಿಲ್ಲಾ. ಮೂರುಕಾಲದಲ್ಲಿ ಇಲ್ಲದ್ದು ಅಸತ್ತು ಎಂದರೆ, ಇದು ಲೋಕದಲ್ಲಿ ಅಪ್ರಸಿದ್ಧವು. ಪ್ರಪಂಚಕಾಲದಲ್ಲಿ ಪ್ರಪಂಚವಿಲ್ಲವೆಂದು ಯಾವನೂ ಹೇಳಲಾರನು. ಘಟವಿರುವಕಾಲದಲ್ಲಿ ಘಟವಿಲ್ಲೆಂದು ಯಾವನೂ ಅನ್ನಲಾರನು. ಆದ್ದರಿಂದ ಮೂರುಕಾಲದಲ್ಲಿಲ್ಲದ್ದು ಅಸತ್ತು ಎಂದು ಹೇಳಲಿಕ್ಕೆ ಬರುವದಿಲ್ಲಾ. ಆದರೆ ತನಗೆ ಸಮಾನವಾಗದ ಕಾಲದಲ್ಲಿ ತೋರದಿರುವುದೇ ಅಸತ್ಯವೆಂದು ಹೇಳತಕ್ಕದ್ದು. ಘಟಕ್ಕೆ ಸಮಾನವಾಗದಿರುವಕಾಲವೆಂದರೆ, ಘಟೋತ್ಪತ್ತಿಗಿಂತಲೂ ಮೊದಲಿನ ಕಾಲವು ಅಥವಾ ಘಟವಿಲಯಕಾಲವು ಈ ಕಾಲಗಳಲ್ಲಿ ಘಟವು ತೋರದಿರುವದರಿಂದ ಘಟವು ಅಸತ್ಯವು. ಆ ಘಟಕ್ಕೆ ಕಾರಣವಾದ ಮಣ್ಣು ತನ್ನ ಸ್ವರೂಪವನ್ನು ಬಿಡದಿರುವದರಿಂದ ಕಾರಣವಾದ ಮಣ್ಣು ಘಟಕ್ಕಿಂತಲೂ ಸತ್ಯವಾಯಿತು. ಇದರಂತೆ ಪ್ರಪಂಚೋತ್ಪತ್ತಿಗಿಂತಲೂ ಪೂರ್ವದಲ್ಲಿ ಅಥವಾ ಮುಂದೆ ಪ್ರಪಂಚದ ವಿಲಯಕಾಲದಲ್ಲಿ ಪ್ರಪಂಚವು ತೋರದಿರುವಕಾರಣ ಪ್ರಪಂಚವು ಅಸತ್ತು. ಬ್ರಹ್ಮವು ಸದಾ ಇರುವದರಿಂದ ಸತ್ಯವು. ಆದ್ದರಿಂದ ಬ್ರಹ್ಮಾದ್ವೈತಿಯೇ ನಮ್ಮ ಮತದಲ್ಲಿ ಸತ್ಯತ್ವವು ಅನಾಪೇಕ್ಷಿತವೆಂತಲೂ, ಸಾಪೇಕ್ಷಿತವೆಂತಲೂ ಎರಡು ಪ್ರಕಾರವಾಗಿದೆ. ಮಣ್ಣು ಮೊದಲಾದ ಕಾರಣದ ಸತ್ಯತ್ವವು ಸಾಪೇಕ್ಷಿಕವಾದದ್ದು ಪರಮ ಕಾರಣವಾದ ಬ್ರಹ್ಮವು ಯಾವಾಗಲೂ ಇದ್ದು ತೋರುವದರಿಂದ ಆ ಬ್ರಹ್ಮದ ಸತ್ಯತ್ವವು ನಿರಪೇಕ್ಷಿಕ

ಜ್ಞಾತವ್ಯಂ ನತ್ವೇಕೇನಕಾರಣರೂಪೇಣೈಕೇನ ಕಾರ್ಯರೂಪೇಣೇತಿ ಸೂಚಿತ ಮಿತಿ ಸೂಕ್ಷ್ಮದೃಶಾವಧೇಯಂ ||೧೧||

ಮೂ|| ಪ್ರತಿಬೋಧವಿದಿತಂ ಮತಮಮೃತತ್ವಂಹಿವಿಂದ ತೇ । ಆತ್ಮನಾವಿಂದತೇವೀರ್ಯಂ ವಿದ್ಯಯಾವಿಂದ ತೇಮೃತಂ ||೧೨||

ಶಾಂ|| ಗುರುಕೃತ ಲಿಂಗಧಾರಣಾ. ಅಭ್ಯಾಸವಶೇನ ಜಲಪತಿತತೈಲವತ್ ಪ್ರಕರ್ಷಮಾದಧಾನಾ ಸತೀ ದರ್ಶನರೂಪಾಭವತಿ ತೇನಸಾಕ್ಷಾತ್ಕಾರಾತ್ಮಕೇ ನಪ್ರತಿಭೋಧೇನ ವಿದಿತಮೇವ ಬ್ರಹ್ಮಸಮ್ಯಗ್‌ಜ್ಞಾತಂ ನಾನ್ಯಥೇತ್ಯಾಹ ಪ್ರತಿ ಬೋಧವಿದಿತಮಿತಿ|| ಪ್ರತಿಬೋಧೋನಾಮ ಲಿಂಗಾಂಗಸಾಮರಸ್ಯರೂಪ ಶಿವಾ ದ್ವೈತಜ್ಞಾನಂ ತಸ್ಯದ್ವೈತಜ್ಞಾನಾತ್ಮಕ ಸುಖದುಃಖಮೋಹ ಸಂಕಲ್ಪ ವಿಕಲ್ಪಾ

---

ವಾದದ್ದು. (ಆದ್ದರಿಂದ "ಅವಿಜ್ಞಾತಂ ವಿಜಾನತಾಂ ವಿಜ್ಞಾತಮ ವಿಜಾನಾತಾಂ" ಎಂಬಲ್ಲಿ ನಾನು ಮೊದಲು ಆ ರೀತಿಯಾಗಿ ವ್ಯಾಖ್ಯಾನ ಮಾಡಿರುವದು ಯುಕ್ತವೇ ಆಗಿದೆ ಎಂಬುವದು ಸೂಕ್ಷ್ಮದೃಷ್ಟಿಯುಳ್ಳವರಿಗೆ ತೋರದೇ ಇರಲಾರದು. ||೧೧||

ಒಂದಾನೊಂದು ನೀರಿನ ಮಡುವಿನಲ್ಲಿ ಬಿದ್ದ ಎಣ್ಣೆಯು ಮೆಲ್ಲಮೆಲ್ಲನೆ ಆ ಮಡುವೆಲ್ಲ ವನ್ನು ವ್ಯಾಪಿಸಿಕೊಳ್ಳುವಂತೆ ಎಲೈ ಶಿಷ್ಯನೇ! ಇಗೋ ಈ ನಿನ್ನ ಸೂಕ್ಷ್ಮಶರೀರದಲ್ಲಿರುವ ಪ್ರಾಣಲಿಂಗವು ಸರ್ವಜಗತ್ಸ್ವರೂಪನಾದ ಪರಶಿವಲಿಂಗವು ಆ ಲಿಂಗವೇ ನೀನಾಗಿದ್ದಿ. ಆ ಲಿಂಗ ಕ್ಕಿಂತಲೂ ನೀನು ಬೇರೆಯಲ್ಲಾ ಎಂದು "ತತ್ವಮಸಿ" ಮೊದಲಾದ ವಾಕ್ಯಗಳಿಂ ಉಪದೇಶಿಸಿ ಆ ಶಿಷ್ಯನ ಸೂಕ್ಷ್ಮಶರೀರದಲ್ಲಿ ಪ್ರಾಣಲಿಂಗವನ್ನು ಧಾರಣೆಮಾಡಿದಮೇಲೆ ಶಿಷ್ಯನೂ ಕೂಡಾ ಆ ಸರ್ವಾತ್ಮ ಶಿವನೇ ನಾನು ಎಂದು ಸರ್ವರೂ ಪರಶಿವಾಕಾರ ವೃತ್ತಿಯನ್ನು ಅಭ್ಯಾಸಮಾಡು ತ್ತಬರಲು ಇವನ ಆ ವೃತ್ತಿಯು ಸರ್ವಾತ್ಮ ಶಿವನನ್ನು ವ್ಯಾಪಿಸಿಬಿಡುವದು. ಈ ಪ್ರಕಾರ ತ್ರಿಪು ಟಿಯೂ ಕೂಡಾ ಅಡಗಿ ಆ ಶಿವನನ್ನು ವ್ಯಾಪಿಸಿಕೊಂಡಿರುವ ಚಿತ್ತವೃತ್ತಿಯೇ ಶಿವಸಾಕ್ಷಾತ್ಕಾ ರವೆನಿಸುವದು ಅದುವೆ ಚಿಚ್ಛಕ್ತಿಯನಿಸುವದು ಅದುವೇ ಶಿವನ ಅಂತಃಕರಣವೆನಿಸುವದು. ಅದ ಕ್ಕೇನೇ ಅನಾದಿ ಬೋಧವೆನ್ನುವರು ಅದಕ್ಕೇನೆ ಭಾಂಡಸ್ಥಲವೆನ್ನುವರು ಇಂಥ ಅಪರೋಕ್ಷಜ್ಞಾ ನಕ್ಕೆ ಆ ಪರಶಿವ ಬ್ರಹ್ಮವಿಷಯವಾಗುವದು ಈ ಜ್ಞಾನಕ್ಕೆ ಸಮ್ಯಗ್ಜ್ಞಾನವೆನ್ನುವರು. ಅಲ್ಲದೆ ಬೇರೆ ಜ್ಞಾನಕ್ಕೆ ಬ್ರಹ್ಮಜ್ಞಾನವೆಂದು ಹೇಳುವದಿಲ್ಲಾ ಎಂಬುವ ಮೊದಲಾದ ವಿಷಯಗಳನ್ನು ಹೇಳುತ್ತದೆ. ಈ ಹನ್ನೆರಡನೇ ಮಂತ್ರದಲ್ಲಿರುವ ಪ್ರತಿ ಬೋಧವೆಂದರೆ ಲಿಂಗಾಂಗ ಸಾಮರಸ್ಯ ರೂಪವಾದ ಶಿವಾದ್ವೈತ ಜ್ಞಾನವು. ಇದು ದ್ವೈತಜ್ಞಾನರೂಪಗಳಾದ ಸುಖದುಃಖ ಮೋಹ ಮೊದಲಾದ ಬಂಧಗಳಿಗೆ ನಿವರ್ತಕವಾಗಿರುವ ಕಾರಣ ಇದಕ್ಕೆ ಪ್ರತಿಕೂಲವಾದ ಬೋಧವೆಂ

ಧ್ಯವಸಾಯಾದಿರೂಪ ಬಂಧನಿವರ್ತಕತ್ವಾತ್ ತೇನ ಪರಾಹಂತಾಮಯಾಪರೋಕ್ಷ ವಿಮರ್ಶಾಪರಪರ್ಯಾಯಭಾಂಡಸ್ಥಾನೀಯ ಚಿಚ್ಛಕ್ತಿರೂಪೇಣವಿದಿತಂ ವಿಷಯೀಕೃತಂ ಯತ್, ತನ್ಮತಂ ಸಮ್ಯಗ್ದೃಷ್ಟಂಬ್ರಹ್ಮ. ಯೇನ ಸ ಪ್ರತಿಬೋಧನಾನ್ ಅಮೃತತ್ವಂ ಮರಣಾದ್ಯಭಾವಂ ಮುಕ್ತಿಂ ವಿಂದತೆ ಪ್ರಾಪ್ನೋತಿ. ತದುಕ್ತಂ ಶಿವಸೂತ್ರೆ ,,ವಿದ್ಯಾವಿನಾಶೆ ಜನ್ಮವಿನಾಶಃ,, ಇತಿ, ಉಕ್ತಂಚ ಶ್ರೀಮದ್ರೇಣುಕ ಭಗವತ್ಪಾದೈಃ | ಶಿವಏವಜಗತ್ಸರ್ವಂ ಶಿವಏವಾಹಮಿತ್ಯಪಿ | ಭಾವಯನ್ ಪರಮೋ ಯೋಗೀ ಭವದೋಷೈರ್ನಲಿಪ್ಯತೆ || ಇತಿ, ಉಕ್ತಂಚ ಶ್ರೀಕಂಠ್ಯಾಂ| ಸಪ್ರಪಂಚಂಪರಿತ್ಯಜ್ಯ ಹೇಯೋಪಾದೇಯಲಕ್ಷಣಂ | ತೃಣಾದಿಕಂ ತಥಾಪರ್ಣಂ ಪಾಷಾಣಂ ಸಚರಾಚರಂ || ಶಿವಾದ್ಯವನಿಪರ್ಯಂತಂ ಭಾವಾಭಾವೋಪಬೃಂಹಿತಂ | ಸರ್ವಂ ಶಿವಮಯಂಧ್ಯಾತ್ವಾ ಭೂಯೋಜನ್ಮನವಾಪ್ನುಯಾತ್||

---

ದು ಶ್ರುತಿಯು ಹೇಳುತ್ತದೆ ಈ ಜ್ಞಾನವುಳ್ಳವನು ಅಮೃತತ್ವವನ್ನು (ಮುಕ್ತಿಯನ್ನು) ಹೊಂದುತ್ತಾನೆ. ಈ ವಿಷಯದಲ್ಲಿ ಶಿವಾದ್ವೈತವಿಧಿಯು ದೃಢವಾಗಲು ಜನನ ಮರಣಗಳ ನಾಶವಾಗುತ್ತದೆಂದು ಹೇಳುವ ಶಿವಸೂತ್ರವೂ, ಸಮಸ್ತ ಜಗತ್ತು ಶಿವರೂಪವಾಗಿದೆ. ಆ ಶಿವನೇ ನಾನಾಗಿದ್ದೇನೆಂದು ಭಾವಿಸುವ ಶ್ರೇಷ್ಠಯೋಗಿಯು ಜನನ ಮರಣ ರೂಪಗಳಾದ ಭವದೋಷಗಳಿಂದ ಲೇಪಿಸಲ್ಪಡುವದಿಲ್ಲವೆಂಬ ಸಿದ್ಧಾಂತ ಶಿಖಾಮಣಿಯ ವಚನವೂ, ಹೇಯ ಮತ್ತು ಉಪಾದೇಯಗಳಾದ ವಸ್ತುಗಳಿಂದ ಕೂಡಿದ ಸಮಸ್ತ ಪ್ರಪಂಚವನ್ನು ಪರಿತ್ಯಜಿಸಿ, ತೃಣ, ಕಾಷ್ಟ, ಪರ್ಣ, ಪಾಷಾಣ ಮೊದಲಾದ ಚರಾಚರ ಪ್ರಪಂಚವೂ, ಶಿವಾದಿ ಭೂಮ್ಯಂತ ತತ್ವಗಳೂ, ಭಾವಾಭಾವಗಳೂ ಶಿವರೂಪಗಳೇ ಆಗುವವು ಆ ಶಿವನೇ ನಾನು ಎಂದು ಧ್ಯಾನ ತತ್ಪರನಾದವನಿಗೆ ಪುನರ್ಜನ್ಮವೇ ಇಲ್ಲಾ. ಜನನ ಮರಣಗಳ ಬಾಧೆಯೇ ತಪ್ಪಿಹೋಗುವದೆಂಬುವ ಶ್ರೀಕಂಠಿ ಎಂಬ ಗ್ರಂಥವೂ ಪ್ರಮಾಣಗಳಾಗಿರುವವು. ಮತ್ತು ಆ ಅಂತರ್ಲಿಂಗಾನುಸಂಧಾನರೂಪವಾದ ಲಿಂಗಧಾರಣೆಯು ಬಲಿತು, ಅಪರೋಕ್ಷರೂಪವಾಗುತ್ತದೆಂಬವಿಷಯದಲ್ಲಿ ಧ್ಯೇಯವಸ್ತುವಿನಲ್ಲಿ ಚಿತ್ತವು ಯಾವಾಗ ಲೀನವಾಗುವದೋ? ಆಗ ಅದು ಧ್ಯಾನವೆನಿಸುವದು. ಅನಂತರದಲ್ಲಿ ಧ್ಯೇಯವಸ್ತುವಿನ ಸಾಕ್ಷಾತ್ಕಾರವಾಗುವದು. ಆಮೇಲೆ ಧ್ಯಾತೃವು ಧ್ಯೇಯಸ್ವರೂಪನೇ ಆಗುವನು. ಎಂಬರ್ಥವುಳ್ಳ ವಿಶ್ವಸಂಹಿತೆ ಎಂಬ ಗ್ರಂಥವೂ, ಎಲೈಪರಶಿವನೆ ನಿನ್ನ ಸ್ವರೂಪನೇ ನಾನು ಎಂದು ಯಾವನು ಭಾವನಾಭ್ಯಾಸವನ್ನು ಮಾಡಿ ಅಹಂಕಾರ ಮಮಕಾರಗಳೆಂಬ ಗಂಟುಗಳನ್ನು ಲೀನಗೊಳಿಸಿಬಿಡುವನೋ ಅವನು ನಿನ್ನ ಸ್ವರೂಪವನ್ನು ಪ್ರತ್ಯಕ್ಷವಾಗಿಯೇ ನೋಡಿಬಿಡುವನೆಂದು ಹೇಳುವ ಷಾಡ್ಗುಣ್ಯ ವಿವೇಕವೆಂಬ ಗ್ರಂಥವೂ, ಪ್ರಮಾಣಗಳಾಗಿರುವವು. ‘ ಪ್ರತಿಬೋಧವಿದಿತಂಮತಂ'' ಎಂಬ ಮಂತ್ರದಲ್ಲಿರುವ ಪ್ರತಿಬೋಧಶಬ್ದಕ್ಕೆ ಲಿಂಗಾಂಗ ಸಾಮರಸ್ಯರೂಪವಾದ ಶಿವಾದ್ವೈತ ಜ್ಞಾನವೆಂದು ಅರ್ಥಮಾಡಿರುವ ವಿಷಯದಲ್ಲಿ ವ್ಯಾಪಕವಾದ

ಇತಿ. ಅತ್ರ ಶಿವಸೂತ್ರಾದಿಷೂಕ್ತ್ಯಾಯಾ ಭಾವನಾರೂಪವಿದ್ಯಾಯಾ ಅವಿನಾಶೇ ಸತತೋಽಸ್ಮಿನ್ನತ್ವೇ ತಸ್ಯಾಃ ಸಾಕ್ಷಾತ್ಕಾರರೂಪ ಪ್ರತಿಬೋಧರೂಪತ್ವಾತ್ ಉಕ್ತಂಹಿ ವಿಶ್ವಸಂಹಿತಾಯಾಂ | ಧ್ಯೇಯೇಚಿತ್ತಂ ಯದಾಲೀನಂ ತದಾಧ್ಯಾನ ಮುದಾಹೃತಂ | ಧ್ಯೇಯಃ ಪ್ರತ್ಯಕ್ಷತಾಂಯಾತಿ ಧ್ಯಾತಾ ತನ್ಮಯತಾಂವ್ರಜೇತ್ || ಉಕ್ತಂಚ ಷಾಡ್ಗುಣ್ಯವಿವೇಕೇ | ಏವಂ ತನ್ಮಯಏವಾಹಮಿತಿಭಾವನಯಾಯದಿ | ಪ್ರಲೀನಾಹಂಕೃತಿಗ್ರಂಥಿಃ ಪಶ್ಯತ್ಯೇವತ್ವದಾತ್ಮತಾಂ || ಇತಿ. ಉಕ್ತಂಚ ಮಾಲಿನೀವಿಜಯೆ | ಅಕಿಂಚಿಚ್ಚಿಂತಕಸ್ಯೈವ ಗುರುಣಾಪ್ರತಿಬೋಧತಃ | ಜಾಯತೇ ಯಃ ಸಮಾವೇಶಃ ಶಾಂಭವೋ ಸಾವುದೀರಿತಃ|| ಇತಿ. ಅತ್ರ ಸಮಾವೇಶಃ ಸಂಯೋಗಃ ಸಾಮರಸ್ಯಂ ನದ್ಯೋಯಬ್ಧೌ ತಾದಾತ್ಮ್ಯಮಿವಗಚ್ಛಂತಿಪರಪದಂ ತಾದೃಶಶಾಂಭವ ವಿದ್ಯಾರಸಿಕಾಃ ಕರಕಸ್ಯಮಂದಂಮಂದಂ ಜಲರೂಪಂಗತಸ್ಯ ಸಮುದ್ರಪತಿತಸ್ಯ, ತಾಮ್ರಸ್ಯ ಸುವರ್ಣಭಾವಮಾಪನ್ನಸ್ಯ, ನವ

---

ಪರಶಿವಲಿಂಗವನ್ನು ಧ್ಯಾನಮಾಡುವ ಶಿಷ್ಯನಿಗೆ ಗುರುಮುಖದಿಂದ ಮಹಾವಾಕ್ಯಗಳ ಶ್ರವಣವಾದಮೇಲೆ ಪ್ರತಿಬೋಧೆಯುಂಟಾಗಿ, ಯಾವ ಸಮಾವೇಶವಾಗುವದೊ, ಅದಕ್ಕೆ ಶಾಂಭವೋಪಾಯವೆಂದು ಹೇಳುವರೆಂಬುವ ಮಾಲಿನೀ ವಿಜಯಗ್ರಂಥವು ಪ್ರಮಾಣವಾಗಿದೆ. ಈ ಶಾಂಭವೋಪಾಯಕ್ಕೇನೆ ಶಾಂಭವೀದೀಕ್ಷೆಯೆಂತಲೂ, ವೇಧಾದೀಕ್ಷೆಯೆಂತಲೂ ಹೆಸರು. ಶಿವನಲ್ಲಿ ಜೀವನ ಸಮಾವೇಶವೆಂದರೆ ಲಿಂಗಾಂಗ ಸಾಮರಸ್ಯವೆಂದೇ ಅರ್ಥವು. ಇಂಥ ಸಾಮರಸ್ಯ ವಿದ್ಯಾರಸಿಕರಾದ ವೀರಶೈವರು ನದಿಗಳು ಸಮುದ್ರದಲ್ಲಿ ಕೂಡಿ ತಾದಾತ್ಮ್ಯವನ್ನು (ಐಕ್ಯವನ್ನು) ಹೊಂದುವಂತೆ ಪರಶಿವಲಿಂಗದ ಅಭಿನ್ನತ್ವವನ್ನು ಹೊಂದುವರು. ಆಮೇಲೆ ಇವರಿಗೆ ಪಶುತ್ವ (ಜೀವ) ಭಾವವು ತಪ್ಪಿ ಶಿವಭಾವವುಂಟಾಗುವದು. ಎಲೈ ಶಿವಾದ್ವೈತಿಯೆ ! ನಿನ್ನ ಮತದಲ್ಲಿ ಬಂಧವೂ ಕೂಡಾ ಸತ್ಯವೆಂದು ಹೇಳುವುದರಿಂದ, ಜೀವನಿಗೆ ಜೀವಭಾವದ ನಿವೃತ್ತಿಯು ಹೇಗೆ ಅಂದರೆ ಬ್ರಹ್ಮಾದ್ವೈತಿಯೇ! ಕೇಳು; ಆಲೀಕಲ್ಲು ಸತ್ಯವಾದರೂ ಅದು ನೀರಾಗಿ ಸಮುದ್ರಕ್ಕೆ ಕೂಡಿದ ಕಾಲದಲ್ಲಿ ಆ ಆಲಿಕಲ್ಲಿನ ನಿವೃತ್ತಿಯೂ, ತಾಮ್ರವು ಸತ್ಯವಾದರೂ ಅದು ರಸಯೋಗದಿಂದ ಸುವರ್ಣವಾದಕಾಲದಲ್ಲಿ ಆ ತಾಮ್ರದ ನಿವೃತ್ತಿಯೂ, ತುಪ್ಪವಾದ ಕಾಲದಲ್ಲಿ ಸತ್ಯವಾದ ಬೆಣ್ಣೆಯ ನಿವೃತ್ತಿಯೂ, ಮುತ್ತಾದ ಕಾಲದಲ್ಲಿ ಸತ್ಯವಾದ ಜಲದ ನಿವೃತ್ತಿಯು ಸತ್ಯವಾದ ಸ್ಥೂಲ ಘಟವು ಬುದ್ಧಿಯನ್ನು ಹೊಂದಿ, ಸೂಕ್ಷ್ಮರೂಪದಿಂದಿರುವ ಕಾಲದಲ್ಲಿ ಆ ಸ್ಥೂಲ ಘಟದ ನಿವೃತ್ತಿಯೂ ಲೋಕದಲ್ಲಿ ಕಂಡುಬರುವದಲ್ಲವೆ ? ಪುನಃ ಆ ತಾಮ್ರಾದಿಗಳಿಗೆ ಸುವರ್ಣಾದಿ ಭಾವವು ತಪ್ಪಿ, ತಾಮ್ರಾದಿ ಭಾವ ಬರುವದನ್ನು ಯಾರು ತಾನೇ ಹೇಳುವರು? ಯಾರೂ ಹೇಳಲಾರರು. ಅದರಂತೆ ಶಿವಯೋಗದಿಂದ ಜೀವನಿಗೆ ಪ್ರಾಪ್ತವಾದ ಶಿವಭಾವವು ತಪ್ಪಿಹೋಗಿ, ಪುನಃ ಜೀವಭಾವವು ಎಂದೂ ಬರುವದಿಲ್ಲಾ. ಜಲದಲ್ಲಿರುವ

ನೀತಸ್ಯಘೃತಭಾವಂಗತಸ್ಯ, ಜಲಸ್ಯವೋಕ್ತಿಕತ್ವಂಗತಸ್ಯ, ಘಟಸ್ಯಸ್ಥೂಲಸ್ಯಬು ದ್ಧಿಂಗತಸ್ಯ ಸೂಕ್ಷ್ಮಭಾವಮಾಪನ್ನಸ್ಯ, ಚ ನ ಯಥಾ ಪೂರ್ವರೂಪತಾ, ತಥಾ ಅಗ್ನಿ ಸಂಯುಕ್ತ ಸಲಿಲಶೈತ್ಯಸ್ಯ ಶನೈಃಶನೈರ್ವಿನಾಶವತ್ | ಸಮನಾಂತಪಾಶ ಜಾಲಸ್ಯವಿನಾಶೇ. ಪ್ರತಿಬೋಧತಃ ಶಿವಭಾವಮಾಪನ್ನಸ್ಯ ನ ಪುನಃ ಪಶುತ್ವಂ | ತತ್ರತ್ರಯವಿನಿರ್ಮುಕ್ತಃ ಶಾಶ್ವತಂ ತ್ವಚಲಂ ಧ್ರುವಂ| ದಿವ್ಯೇನಯೋಗಮಾರ್ಗೇ ಣದೃಷ್ಟ್ವಾ ಭೂಯೋನಜಾಯತೆ || ಪಾಶಯುಕ್ತೋಭವೇಜ್ಜೀವಃ ಪಾಶಮು ಕ್ತೋಭವೇಚ್ಛಿವಃ || ಇತ್ಯುಕ್ತತ್ವಾತ್ | ಸಮನಾಂತಂ ಪಾಶಜಾಲಮುನ್ಮನ್ಯಂ ತೇಪರಃ ಶಿವಃ | ಇತ್ಯುಕ್ತತ್ವಾಚ್ಚ | ಉನ್ಮನೀ ಶಿವವ್ಯಾಪ್ತಿರೂಪಾ ಶಿವಾದ್ವೈ ತವಿದ್ಯಾ ದ್ವಾದಶಾಂತಾ ಪರಪರ್ಯಾಯಾ | ಉಕ್ತಂಚಸ್ವಚ್ಛಂದೆ | ಸಾರ್ವ ಜ್ಞ್ಯಾದಿಗುಣಾಯೇಥಾ ವ್ಯಾಪಕಾನ್ ಭಾವಯೇದ್ಯದಾ | ಶಿವವ್ಯಾಪ್ತಿರ್ಭ ವತ್ಯೇಷಾ ಚೈತನ್ಯೇಹೇತುರೂಪಿಣೀ || ಉನ್ಮನಾಸಾತುವಿಜ್ಞೇಯಾ | ಇತಿಚ.

---

ಶೈತ್ಯಗುಣವು ಜಲಕ್ಕೆ ಅಗ್ನಿಸಂಯೋಗವಾದಮೇಲೆ ಮೆಲ್ಲಮೆಲ್ಲನೆ ನಷ್ಟವಾಗಿ ಬಿಡುವಂತೆ, ಪಶುರೂಪನಾದ ಜೀವನೆಂಬಂಗಕ್ಕೆ ಶಿವಲಿಂಗದ ಸಂಯೋಗವಾದಮೇಲೆ, ಆ ಯೋಗಾಭ್ಯಾಸ ದಿಂದ ಸಮನಾಂತವಾದ ಪಾಶಜಾಲವೆಲ್ಲ ನಷ್ಟವಾಗಿಬಿಡುವದಲ್ಲದೆ ಶಿವತ್ವಪ್ರಾಪ್ತಿಯಾಗುವ ದು. ಅಂದಮೇಲೆ ಜೀವನಿಗೆ ಪಶುತ್ವವು ಉಳಿಯುವದಿಲ್ಲಾ. ಈ ವಿಷಯದಲ್ಲಿ ಪಾಶಗಳಿಂದ ಕೂಡಿದವನೇ ಜೀವನು ಪಾಶಗಳಿಂದ ಬಿಡಲ್ಪಟ್ಟವನೇ ಶಿವನೆಂಬುವ ಆಗಮವಾಕ್ಯವೂ, ದಿವ್ಯ ವಾದ ಯೋಗಮಾರ್ಗವೆಂಬ ಶಿವಾದ್ವೈತದೃಷ್ಟಿಯಿಂದ ಧ್ಯಾತೃ ಧ್ಯಾನ ಧ್ಯೇಯಗಳೆಂಬ ತ್ರಿಪು ಟಿಗಳನ್ನು ಅಡಗಿಸಿ, ಶಾಶ್ವತವಾದ ಶಿವಪದವನ್ನು ಹೊಂದಿ. ಪುನಃ ಹುಟ್ಟುವದಿಲ್ಲವೆಂಬ ಬೇರೆ ಗ್ರಂಥವೂ ಪ್ರಮಾಣಗಳಾಗಿವೆಯಲ್ಲದೆ ಸಮನಾಂತವಾದ ಪಾಶಗಳ ಸಮೂಹವು. ಉನ್ಮನ್ಯಂತ ದಲ್ಲಿ ಪರಶಿವಸ್ವರೂಪನಾಗುವನೆಂಬ ವಿಷಯದಲ್ಲಿ "ಸಮನಾಂತಂ ಪಾಶಜಾಲಂ ಉನ್ಮನ್ಯಂತೆ ಪರಃ ಶಿವಃ" ಎಂಬಾಗಮವಾಕ್ಯವು ಪ್ರಮಾಣವಾಗಿದೆ. ಉನ್ಮನೀಯೆಂದರೆ ಶಿವಾದ್ವೈತವಿದ್ಯೆ ಯು ಇದಕ್ಕೆ ಶಿವವ್ಯಾಪ್ತಿಯೆಂತಲೂ, ದ್ವಾದಶಾಂತವೆಂತಲೂ ಪರ್ಯಾಯನಾಮಗಳು. ಈ ವಿಷಯದಲ್ಲಿ ಸರ್ವಜ್ಞತ್ವಾದಿ ಗಣಗಳನ್ನು ಯಾವಾಗ ನನ್ನವೆಂದು ಭಾವಿಸುವನೋ ಆ ಭಾವ ನೆಯೇ ಶಿವವ್ಯಾಪ್ತಿಯೆನಿಸುವದೆಂಬ ಸ್ವಚ್ಛಂದ ಗ್ರಂಥವು ಪ್ರಮಾಣವಾಗಿದೆ. ಈ ಶಿವಾದ್ವೈತ ಜ್ಞಾನಾವಸ್ಥೆಗೇನೇ ಉನ್ಮನ್ಯವಸ್ಥೆಯೆಂದು ಹೆಸರು. ಈ ವಿಷಯದಲ್ಲಿ ಆ ಶಿವವ್ಯಾಪ್ತಿಯೇ ಉನ್ಮನಿಯ ಎಂದು ಹೇಳುವರು. ಅದೇ ಸ್ವಚ್ಛಂದವೇ ಪ್ರಮಾಣವು. ಸಮನಾ ಎಂಬುವ ಕಳೆ ಗಳವರಿಗಿರುವ ಹನ್ನೆರಡು ಪಾಶಗಳ ಹೆಸರನ್ನು ಶ್ರೀ ಶಾಂಕರೀಕಾರನು ತೋರಿಸಿದ್ದಾನೆ ನೋ ಡಿಕೊಳ್ಳತಕ್ಕದ್ದು. ಈ ಎಲ್ಲಾ ಪಾಶಗಳನ್ನು ನಾಶಮಾಡಲು ಸಮರ್ಥವಾದ ಉಪಾಯವೆಂ ದರೆ, ಮಂತ್ರದಲ್ಲಿ ಹೇಳಲ್ಪಟ್ಟ ಪ್ರತಿಬೋಧಶಬ್ದವಾಚ್ಯವಾದ ಶಿವಾದ್ವೈತಜ್ಞಾನವು. ಈ ಶಿವಾ

ಅಕಾರಶ್ಚ ಉಕಾರಶ್ಚ ಮಕಾರೋ ಬಿಂದುರೇವಚ | ಅರ್ಧಚಂದ್ರೋನಿರೋ
ಧೀಚನಾದೋನಾದಾಂತಏವಚ || ಶಕ್ತಿಶ್ಚ ವ್ಯಾಪಿನೀಚೈವ ವ್ಯೋಮರೂಪಾ
ತ್ವನಂತರಂ | ಅಥಾನಾಶ್ರಿತಾಚೈವ ಸಮನಾ ಉನ್ಮನಾತಥಾ ಸಮನಾಂತಃ
ಪಾಶಜಾಲ ಮುನ್ಮನ್ಯಂತೇಪರಃ ಶಿವಃ || ಇತ್ಯುಕ್ತೇಃ ಸ್ವಸ್ವರೂಪಪ್ರಕಾಶ ರೂಪಾ
ತ್ಮಶಕ್ತಿ ಪ್ರತಿರೋಧಕ ಬಾಹ್ಯವಿಷಯಾಕಾರ ದ್ವೈತವೃತ್ತಿ ಪ್ರಾತಿಕೂಲ್ಯಪ್ರಯು
ಕ್ತಾಂತರ್ಧ್ಯೇಯಾಭಿಮುಖಾದ್ವೈತಾವಿಚ್ಛಿತ್ತಿ ಚಿತ್ತವೃತ್ತಿರೂಪಧ್ಯಾನ ನಿರ್ಮ
ಥನಾಭ್ಯಾಸ ಪ್ರಾಪ್ತಬೋಧಏವಪ್ರತಿಬೋಧಃ ಪಾಶವಿಚ್ಛೇದನಸಮರ್ಥಃ «ಧ್ಯಾ
ನನಿರ್ಮಥನಾಭ್ಯಾಸಾತ್ಪಾಶಂದಹತಿಪಂಡಿತಃ» ಇತಿಶ್ರುತೇಃ. «ತಸ್ಯಾಭಿಧ್ಯಾ
ನಾದ್ಯೋಜನಾತ್ತತ್ವಭಾವಾತ್. ಭೂಯಸ್ಯಾಂತೇ ವಿಶ್ವಮಾಯಾನಿವೃತ್ತಿಃ»
ಇತಿಶ್ರುತೇಶ್ಚ | ಸರ್ವಮೇತತ್ಪರಿತ್ಯಜ್ಯ ಶಿವಏವಶಿವಂಕರಃ | ಧ್ಯೇಯಇತ್ಯಾಹ.
ಪರಮಾಶ್ರುತಿರಾಥರ್ವಣೀಖಲು || ಇತ್ಯುಕ್ತತ್ವಾಚ್ಚ. ಉಕ್ತಂಚ ರೇಣುಕಭಗ

---

ದ್ವೈತಜ್ಞಾನಕ್ಕೆ ಪ್ರತಿಬೋಧವೆಂದು ಹೆಸರು ಬರಲಿಕ್ಕೆ ಕಾರಣವೇನಂದರೆ—ತನ್ನ ಸರ್ವಜ್ಞ
ತ್ವಾದಿ ಸ್ವರೂಪ ಪ್ರಕಾಶಕ್ಕೆ ಪ್ರತಿಬಂಧಕಗಳಾದ ಬಾಹ್ಯವಿಷಯಾಕಾರ ಚಿತ್ತವೃತ್ತಿಗಳಿಗೆ ಪ್ರತಿ
ಕೂಲವಾಗಿರುವ ಅಂತರ್ಧ್ಯೇಯಾಭಿಮುಖವಾಗಿರುವ ಚಿತ್ತವೃತ್ತಿಯೆಂಬ ಧ್ಯಾನದ ಅಭ್ಯಾಸದಿಂದ
ಆ ಶಿವಾದ್ವೈತಜ್ಞಾನವು ದೃಢವಾಗಿ ಸಾಕ್ಷಾತ್ಕಾರವೆನಿಸುವದು: ಆದಕಾರಣ ಈ ಶಿವಾದ್ವೈತ
ಸಾಕ್ಷಾತ್ಕಾರಕ್ಕೆ ಪ್ರತಿಬೋಧವೆಂದು ರೂಢಿಯುಂಟು. ಈ ಪ್ರತಿಬೋಧವೇ ಪಾಶಗಳ ನಾಶ
ಮಾಡುವದರಲ್ಲಿ ಸಮರ್ಥವಾಗುತ್ತಿದೆ ಎಂಬುವ ವಿಷಯದಲ್ಲಿ ಧ್ಯಾನಮಥನಾಭ್ಯಾಸದಿಂದ ಪಂ
ಡಿತನು ಪಾಶಗಳನ್ನು ಸುಡುವನು ಎಂಬ ಶ್ರುತಿಯೂ, ಇಷ್ಟಲಿಂಗದ ಯೋಚನೆಯಿಂದಲೂ,
ಪ್ರಾಣಲಿಂಗ ಅಭಿಧ್ಯಾನದಿಂದಲೂ, ಭಾವಲಿಂಗದ ಭಾವನೆಯಿಂದ ಎಲ್ಲಾ ಮಾಯೆಗಳ ನಿವೃ
ತ್ತಿಯು ಎಂಬ ಶ್ರುತಿಯೂ, ಮಿಕ್ಕ ದೇವತೆಗಳನ್ನು ಬಿಟ್ಟು ಶಿವನೊಬ್ಬನನ್ನೇ ಧ್ಯಾನಿಸಬೇಕು
ಅವನೇ ಪಾಶಗಳನ್ನು ನಾಶಮಾಡಿ, ಮಂಗಲಪದನು ಮೋಕ್ಷವನ್ನುಂಟುಮಾಡುವನೆಂಬ
ಶ್ರುತಿಯೂ, "ಇದೇ ಅರ್ಥವನ್ನೇ ಕೊಡುವ ಉಪಬೃಂಹಣವಾಕ್ಯವೂ ಪ್ರಮಾಣಗಳಾಗಿವೆಯ
ಲ್ಲದೆ, ಆತ್ಮನೆಂಬ ಅರಣಿ (ಕಟ್ಟಿಗೆ) ಯ ಆನಂದ ಘನನಾದ ಶಿವನ ಧ್ಯಾನವೆಂಬ ಮಥನದಿಂ
ದುಂಟಾದ ಶಿವಾದ್ವೈತ ಜ್ಞಾನವೆಂಬಗ್ನಿಯಿಂದ, ಜ್ಞಾನಿಯು ಜಗದ್ರೂಪವಾದ ಪಾಶಗಳ
ಜಾಲವನ್ನೇ ಸುಡಬೇಕೆಂಬದಾಗಿಯೂ, ಕರ್ಮವೆಂಬ ಬುಡವುಳ್ಳ ಅಜ್ಞಾನ, ಅಸ್ಮಿತಾ, ರಾಗ,
ದ್ವೇಷ, ಅಭಿನಿವೇಶಗಳೆಂಬ ಐದು ಫಲಗಳುಳ್ಳ ಸಂಸಾರವೆಂಬ ವಿಷವೃಕ್ಷದ ಛೇದನದಲ್ಲಿ ಆ ಪರ
ಶಿವಭಾವನೆಯೇ ಕೊಡಲಿಯು ಎಂಬದಾಗಿಯೂ, ಅಜ್ಞಾನ ರಾಕ್ಷಸನ ಆವಿರ್ಭಾವಕ್ಕೆ ಕಾರ
ಣವಾಗಿಯೂ, ಆ ಪರಮಾತ್ಮನ ಸ್ವರೂಪ ಪ್ರಕಾಶಕ್ಕೆ ಆಚ್ಛಾದಕವಾಗಿಯೂ ಇರುವ ಸಂಸಾ
ರವೆಂಬ ಕಾರ್ಗತ್ತಲೆಗೆ ಶಿವಧ್ಯಾನವೇ ಚಂಡಮಾರ್ತಂಡನೆಂಬದಾಗಿಯೂ ಇರುವ ಶ್ರೀಮದ್ಭಗನ

ವತ್ಪಾದ್ಯೈಃ | ಆತ್ಮಾರಣಿಸಮುತ್ಥೇನ ಪ್ರಮೋದಮಥನಾತ್ಸುಧೀಃ | ಜ್ಞಾನಾ-
ಗ್ನಿನಾ ದಹೇತ್ಸರ್ವಂ ಪಾಶಜಾಲಂ ಜಗನ್ಮಯಂ|| ಸಂಸಾರವಿಷವೃಕ್ಷಸ್ಯ ಪಂಚ
ಕ್ಲೇಶ ಫಲಾಶಿನಃ ಛೇದನೇ ಕರ್ಮಮೂಲಸ್ಯ ಪರಶುಃ ಶಿವಭಾವನಾ || ಅಜ್ಞಾನ
ಗ್ರಾಸ್ತಸೋನ್ಮೇಷ ಕಾರಣಂ ಸಂವೃತಾತ್ಮನಃ | ಶಿವಧ್ಯಾನಂತು ಸಂಸಾರತಮ
ಸ್ಸಚಂಡಭಾಸ್ಕರಃ || ಇತಿ. ನತು ತತ್ತ್ವಮಸ್ಯಾದಿವಾಕ್ಯಜನ್ಯವೃತ್ತ್ಯವಿಷಯತ್ವೇನ
ಜ್ಞಾನಂ ಪ್ರತಿಬೋಧಃ ಪ್ರತ್ಯಯಪತ್ಯಗಾತ್ಮಾ . | ತಸ್ಯಾಪ್ರಸಿದ್ಧತ್ವಾತ್ |
ನಿರ್ವಿಷಯಸ್ಯಜ್ಞಾನತ್ವೇ ಘಟಾದೀನಾಮಪಿತತ್ಪ್ರಸಂಗಾತ್ | ನನುಜಡಾನಾಂ
ವೃತ್ತೀನಾಂ ಸ್ವಾಭಾವಿಕಪ್ರಕಾಶಾಸತ್ತ್ವಾತ್ ತತ್ತ್ವಮಸ್ಯಾದಿ ವಾಕ್ಯಜನ್ಯ ಚಿತ್ತ
ವೃತ್ತೇರಪಿಜಡತ್ವಾದಜ್ಞಾನನಿವರ್ತಕತ್ವಾಭಾವಾತ್ | ಕಥಮಮೃತತ್ವಂವಿಂ
ದತೇ ಇತಿಚೇತ್ತ್ವಂ ಸಜಾನಾಸಿ ಶಿವಾದ್ವೈತ ಸಿದ್ಧಾಂತರಹಸ್ಯಂ | ಕೋಽಹಮಿ-
ತ್ಯಬ್ರವೀದ್ದೇಹಿ ಗುರುಂ ಪರಮಕಾರಣಂ | ಇತಿ ಶರಣಾಗತಶಿಷ್ಯೇಣ ಪೃಷ್ಟೋ

---

ತ್ಪಾದ ರೇಣುಕ ಶಿವಾಚಾರ್ಯರ ವಾಕ್ಯಗಳೂ ಕೂಡಾ ಪ್ರಮಾಣಭೂತಗಳಾಗಿವೆ. ಆದ್ದರಿಂದ
ಪ್ರತಿಬೋಧಶಬ್ದಕ್ಕೆ ನಾವು ಮಾಡಿದ ಅರ್ಥವೇ ಶ್ರುತಿ ಸ್ಮೃತಿ ಪುರಾಣ ಶಿವಾಗಮಾನುಕೂಲ
ವಾಗಿರುವದು. ಬೇರೆ ಭಾಷ್ಯಕಾರರು ಮಾಡುವ ಅರ್ಥವು ಶ್ರುತ್ಯಾದಿಗಳಿಗೆ ವಿರುದ್ಧವಾಗಿರು
ವದು. ಅವರು ಮಾಡುವದು ಹೇಗೆಂದರೆ—ಬೋಧಂಬೋಧಂಪ್ರತಿ ವರ್ತತೇಯಃ ಸಪ್ರತಿಬೋಧಃ|
ಅಂದರೆ ಸರ್ವ ಅಂತಃಕರಣದ, ಇದು ಘಟವು ಇದು ಮಠವು ಎಂಬುವ ವೃತ್ತಿರೂಪಗಳಾದ
ಪ್ರತ್ಯಯಗಳಲ್ಲಿ ಅನುಗತವಾದ ಯಾವ ವೃತ್ತಿಗೂ ವಿಷಯವಾಗದಿದ್ದ ಪ್ರತ್ಯಗಾತ್ಮ ಅಪರೋಕ್ಷ
ಬ್ರಹ್ಮವೇ ಪ್ರತಿಬೋಧವೆಂದು ಹೇಳುವರು. ಶಾಂಕರೀಕಾರನು "ಪ್ರತಿಕೂಲೋಬೋಧಃ"
ಅಂದರೆ ದ್ವೈತಜ್ಞಾನಗಳಿಗೆ ಪ್ರತಿಕೂಲವಾದ ಶಿವಾದ್ವೈತ ಜ್ಞಾನವೇ ಪ್ರತಿಬೋಧವೆಂದು
ಹೇಳಿದನು. ಇನ್ನು ತಾನು ಮಾಡಿದ ಅರ್ಥವೇ ಸಂಗತವಾದದ್ದೆಂದು ಸಿದ್ಧಾಂತಮಾಡುವನು.
ಹೇಗೆಂದರೆ—ಎಲೈ ಬ್ರಹ್ಮಾದ್ವೈತಿಯೆ! ಆ ಪ್ರತ್ಯಗ್ಬೋಧರೂಪಜ್ಞಾನವು ಸವಿಷಯವೋ? ನಿರ್ವಿ
ಷಯವೋ? ಸವಿಷಯವೆಂದರೆ ನಿನ್ನ ಜ್ಞಾನರೂಪಬ್ರಹ್ಮವು ಜಡವಾಗಬೇಕಾಗುವದು. ನಿರ್ವಿಷಯ
ವೆಂದರೆ- ಘಟ ಮೊದಲಾದ ಪದಾರ್ಥಗಳೂ ಕೂಡ ಜ್ಞಾನಗಳಾದಾವು. ಆದ್ದರಿಂದ ನಿರ್ವಿಷ
ಯವಾದ ಜ್ಞಾನರೂಪ ಬ್ರಹ್ಮವು ಲೋಕದಲ್ಲಿ ಅಪ್ರಸಿದ್ಧವು. ಹಾಗಾದರೆ ಜಡಗಳಾದ ಚಿತ್ತವೃ
ತ್ತಿಗಳಂತೂ ಸ್ವಸ್ವರೂಪ ಬ್ರಹ್ಮ ಪ್ರಕಾಶ ಸ್ವರೂಪಗಳೇ ಅಲ್ಲವು. ಅವುಗಳಿಗೆ ಸ್ವಾಭಾವಿಕ ಪ್ರ
ಕಾಶವು ಸಂಭವಿಸುವದಿಲ್ಲಾ. ತತ್ತ್ವಮಸ್ಯಾದಿ ವಾಕ್ಯಗಳಿಂದುಂಟಾದ ನಾನು ಬ್ರಹ್ಮನು ಎಂಬ
ವೃತ್ತಿಯೂ ಕೂಡ ಜಡವಾಗಿರುವದರಿಂದದಕ್ಕೆ ಅಜ್ಞಾನವನ್ನು ನಾಶಮಾಡಲು ಸಾಮರ್ಥ್ಯವೂ
ಇಲ್ಲಾ. ಆದುದರಿಂದ ಪ್ರತಿಬೋಧವುಳ್ಳವನಿಗೆ ಮುಕ್ತಿಯಾಗುವದೆನ್ನುವ ಮಾತು ಹೇಗೆ ಸಂಗತ
ವಾಗುತ್ತದೆ. ಅಂದರೆ ಎಲೈ ಬ್ರಹ್ಮಾದ್ವೈತಿಯೆ! ನಿನಗೆ ಶಿವಾದ್ವೈತ ಸಿದ್ಧಾಂತದ ರಹಸ್ಯಜ್ಞಾ

ಗುರುಃ ತಸ್ಯ ಸ್ಥೂಲಸೂಕ್ಷ್ಮಕಾರಣಾ ಪರಪರ್ಯಾಯ ತ್ಯಾಗಾಂಗ ಭೋಗಾಂಗ ಯೋಗಾಂಗೇಷು ಕ್ರಿಯಾ ಮನು ವೇಧಾದೀಕ್ಷಾತ್ರಯೇಣ | ಇಷ್ಟಾದಿಲಿಂಗತ್ರಯಂ ಸಂಯೋಜ್ಯ| ತತ್ತ್ವಮಸೀತ್ಯಾಹ ಸತ್ಯಾರ್ಥಂ ಕರುಣಾಸಿದ್ಧಿಃ|| ತತಶ್ಚ ಶಿಷ್ಯಸ್ತದ್ವಿಚಾರಸ್ವಾನುಭವಾಭ್ಯಾಂ. ಸರ್ವಾತ್ಮಕ ಬ್ರಹ್ಮೈವಾಹಮಸ್ಮೀತಿ ನಿಶ್ಚಿತ್ಯ ಷಡಂಗಸ್ಥಲ ಯೋಗಾಭ್ಯಾಸೇ ಪ್ರವರ್ತತೆ | ಅಭ್ಯಾಸ ದಾರ್ಢ್ಯೇಚ ಸದಾಶಿವವತ್ | ತಸ್ಯ ಸರ್ವಾತ್ಮಕ ಶಿವಏವಾಹಮಿತಿ ಚಿಚ್ಛಕ್ತಿರಾವಿರ್ಭವತಿ | ತದಾ ವಿಗಲಿತ ಚಿತಿಶಕ್ತಿಸಂಕೋಚಾಖ್ಯಾತ್ಯಾತ್ಮಕಮಲತ್ವಾತ್ | ಚಿತ್ತಶಕ್ತಿ ವಿಕಾಸರೂಪಾಪರೋಕ್ಷ ಚಿತಿ ಶಕ್ತೇರ್ಜಡತ್ವಾಭಾವಾತ್. ಬಂಧನಿವರ್ತಕತ್ವಾತ್ ತಾದೃಶ ಶಕ್ತಿರೂಪ ಪ್ರತಿಬೋಧವಾನ್ ಪ್ರಾಣಲಿಂಗೀ ತುರ್ಯಾದ್ಯವಸ್ಥಾಪನ್ನಃ ಸ್ವತಂತ್ರಂವಿಂದತ ಏವಾಮೃತತ್ವಂ. ಉಕ್ತಂಚಶಕ್ತಿಸೂತ್ರೆ ‹‹ಚಿತಿರೇವಚೇತನಪದಾದವರೂಢಾಚೈತ್ಯಸಂಕೋಚಿನೀಚಿತ್ತಂ›› ‹‹ತತ್ಪರಿಜ್ಞಾನೇಚ

---

ನವಿಲ್ಲದುದರಿಂದ ಈಪ್ರಕಾರವಾಗಿ ಪ್ರಶ್ನೆ ಮಾಡುವಿಯಲ್ಲವೆ? ಶರಣಾಗತನಾದ ಶಿಷ್ಯನು ಗುರುವಿನ ಹತ್ತಿರ ಬಂದು ಭೋ ಗುರುಮೂರ್ತಿಯೆ! ನಾನು ಯಾರು ಎಂಬುವದನ್ನು ತಿಳಿಸು. ಕೃಪೆಯಾಗಬೇಕೆಂದು ಕೇಳಲಾಗಿ, ಗುರುಮೂರ್ತಿಯು ಶಿಷ್ಯನ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಲ್ಲಿರುವ ಮಲಗಳನ್ನು ಮೂರು ದೀಕ್ಷೆಗಳಿಂದ ಕಳೆದು, ಆ ಮೂರು ಶರೀರಗಳಲ್ಲಿ ಇಷ್ಟಾದಿಲಿಂಗಗಳ ಯೋಜನೆಯನ್ನು ಮಾಡಿ, ಎಲೈ ಶಿಷ್ಯನೆ! ನೀನು ಆ ಲಿಂಗಸ್ವರೂಪನೇ ಇರುವಿ ಎಂದು ಆ ಕರುಣಾಸಿಧಿಯಾದ ಗುರುಮೂರ್ತಿಯು ಅಪ್ಪಣೆ ಮಾಡಲು ಶಿಷ್ಯನು ಆ ಲಿಂಗದ ವಿಚಾರ ಮತ್ತು ಸ್ವಾನುಭವಗಳಿಂದ ಆ ಸರ್ವರೂಪನಾದ ಪರಶಿವನೇ ನಾನೆಂದು ನಿಶ್ಚಯಿಸಿ ಷಟ್‌ಸ್ಥಲ ಯೋಗಾಭ್ಯಾಸದಲ್ಲಿ ಪ್ರವರ್ತಿಸುವನು. ಆ ಅಭ್ಯಾಸವು ದೃಢವಾಗಲು, ಶಿಷ್ಯನಿಗೆ ಚಿಚ್ಛಕ್ತಿರೂಪವಾದ ಶಿವನೇ ನಾನೆಂಬುವ ಜ್ಞಾನವಾಗುತ್ತದೆ

ಅನಂತರದಲ್ಲಿ ಚಿತಿಶಕ್ತಿಸಂಕೋಚರೂಪವಾದ ಅಖ್ಯಾತಿಯು (ಅಜ್ಞಾನದ) ನಾಶವಾಗಿ ಚಿತ್ತಶಕ್ತಿಯ ವಿಕಾಸರೂಪವಾದ ಅಪರೋಕ್ಷ ಸ್ವರೂಪ ಚಿಚ್ಛಕ್ತಿಯುಂಟಾಗುವದು. ಈ ಚಿಚ್ಛಕ್ತಿಯು ಜಡವಾಗದಿರುವದರಿಂದ ಬಂಧದ ನಾಶವನ್ನುಂಟುಮಾಡಲು ಸಮರ್ಥವಾಗುತ್ತದೆ. ಈ ಚಿಚ್ಛಕ್ತಿಯೆಂಬ ಪ್ರತಿಬೋಧವುಳ್ಳ ಪ್ರಾಣಲಿಂಗಿಯು ತುರ್ಯ ಮೊದಲಾದ ಅವಸ್ಥೆಯುಳ್ಳವನಾಗಿಯೂ ಸ್ವತಂತ್ರನಾಗಿಯೂ ಇರುವದರಿಂದ ಅಮೃತತ್ವವನ್ನು (ಮೋಕ್ಷವನ್ನು) ಹೊಂದುವನು. ಶಿವನ ಚಿಚ್ಛಕ್ತಿಯೇ ಚಿತ್ತರೂಪವಾಗಿದೆಯೆಂಬ ವಿಷಯದಲ್ಲಿಯೂ. ಆ ಚಿತ್ತವು ಪುನಃ ಚಿಚ್ಛಕ್ತಿರೂಪವಾಗುತ್ತದೆಂಬ ವಿಷಯದಲ್ಲಿಯೂ, ಶಕ್ತಿ ಸೂತ್ರಗಳೆರಡನ್ನೂ ಶಾಂಕರೀಕಾರನು ಪ್ರಮಾಣಗಳನ್ನಾಗಿ ತೋರಿಸಿರುವನು. ಅವುಗಳ ಅರ್ಥವೇನಂದರೆ—ಆ ಸರ್ವವನ್ನೂ ತನ್ನಲ್ಲಿರಿಸಿಕೊಂಡ ಚಿತಿಶಕ್ತಿ (ಚಿಚ್ಛಕ್ತಿ)ಯು ಆ ಚೇತನರೂಪನಾದ ಶಿವನ ಪದದಿಂದಿಳಿಯುತ್ತ ಕ್ರಮೇಣ

ಚಿತ್ತಮೇವಾಂತರ್ಮುಖೀಭಾವೇನ ಚೇತನಪದಾಧ್ಯಾರೋಹಾಚ್ಚಿತಿಃ॥ ಇತಿ ಉಕ್ತಂಚ ಪದವಾಕ್ಯಪ್ರಮಾಣಜ್ಞೇನ ಮರಿ ತೋಂಟದಾರ್ಯೇಣಾಪಿ | ಚಿತಿಸಂಕೋಚಚಿತ್ತವಿಶಿಷ್ಟೋಜೀವ ಇತಿ. ವಿಷಯವಾಸನಾವಿಶಿಷ್ಟತ್ವಾಚ್ಚಿತ್ತಸ್ಯ ತದ್ವಿಷಯ ನಿಶ್ಚಯಾಭಿಮಾನಸಂಕಲ್ಪ ವಿಕಲ್ಪಾದಿ ವೃತ್ತಿರೂಪವ್ಯಾಪಾರವತ್ವಾತ್. ತದ್ವಿಶಿಷ್ಟಸ್ಯಬಂಧಃ ಯದಾತು ತಚ್ಚಿತ್ತಂ ಪರಿತ್ಯಕ್ತ ಬಹಿರ್ಮುಖೀಭಾವಂಸದಂತರ್ಮುಖೀಭಾವೇನಾರೂಢ ಶಿವಪದಂಭವತಿ. ಮಧ್ಯಭೂತಸುಷುಮ್ನಾಮಾರ್ಗೇಣ ತತ್ತತ್ತತ್ವಾತ್ಮಕಾಚಾರಾದಿ ಲಿಂಗಗ್ರಂಥೀನ್ವಿಭಿದ್ಯ, ಸೋಪಾನಾಕ್ರಮಣಕ್ರಮೇಣಾಕ್ರಾಂತ ತತ್ತದೂರ್ಧ್ವಲಿಂಗಂ ಸತ್ ಚಿಚ್ಛಕ್ತಿರೂಪಂ ಭವತಿ ತದಾಯಂ ಜೀವೋ ಜೀವಭಾವಂಪರಿತ್ಯಜ್ಯ, ಪರಶಿವಮಹಾಲಿಂಗ ಸಮರಸೋಭವತಿ, ಜೀವಭಾವಸ್ಯ ಚಿತ್ತಹೇತುಕತ್ವಾತ್ ಚಿತ್ತಭಾವಸ್ಯಸ್ಯಚ ಚಿಚ್ಛಕ್ತಿಸಂಕೋಚನಿಮಿತ್ತಕತ್ವಾತ್ ಸಾಕ್ಷಾತ್ಕೃತ ಸ್ವಸ್ವರೂಪ ಮಹಾರುದ್ರವಿದ್ರಾವಿತ ನಿಖಿಲಕ್ಷ್ಮ

---

ನೀಲಪೀತಾದಿ ವಿಷಯಗಳನ್ನು ಹೊಂದಿ ಸಂಕೋಚ ಸ್ಥಿತಿಯಿಂದ ಚಿತ್ತರೂಪವಾಗಿದೆ. ಆ ಸರ್ವಾತ್ಮಕ ಶಿವನೇ ನಾನೆಂಬುವ ಜ್ಞಾನವು ದೃಢವಾಗಲು ಚಿತ್ತವು ಅಂತರ್ಮುಖವಾಗಿ ಅಭ್ಯಾಸಕ್ರಮದಿಂದ ಚೇತನ ರೂಪನಾದ ಶಿವಪದವನ್ನು ಹತ್ತಲು ಚಿತಿಶಕ್ತಿರೂಪವೇ ಆಗುತ್ತದೆಂದು ಆ ಸೂತ್ರಗಳಭಿಪ್ರಾಯವು. ವಟ್ಟನಮೇಲೆ ಚಿತ್ತಶಕ್ತಿಯಿಂದ ಕೂಡಿದವನು ಜೀವನು. ಚಿತಿಶಕ್ತಿಯಿಂದ ವಿಶಿಷ್ಟನು ಶಿವನು. ಇವರುಗಳಿಗೆ ಅದ್ವೈತಮತವನ್ನು ಹೇಳುವ ಮತವೇ ಶಿವಾದ್ವೈತಮತವು. ಚಿತ್ತಶಕ್ತಿಯ ವಿಕಾಸವೆಂದರೆ– ತನ್ನ ಸ್ಥೂಲಾವಸ್ಥೆಯನ್ನು ಬಿಟ್ಟು ಸೂಕ್ಷ್ಮವಾಗುವಿಕೆಯು. ಶಿವಯೋಗಾಭ್ಯಾಸದಿಂದ ಚಿತ್ತವು ಸೂಕ್ಷ್ಮ (ಶಿವಾವಸ್ಥೆಯಲ್ಲಿರುವ ಚಿಚ್ಛಕ್ತಿರೂಪ) ವಾಗಲಾಗಿ ಜೀವನು ಶಿವನಾಗುವನು. ಈ ಅದ್ವೈತವನ್ನು ಬೋಧಿಸತಕ್ಕವುಗಳೇ ತತ್ವಮಸ್ಯಾದಿ ವಾಕ್ಯಗಳು. ನಮ್ಮ ಶಿವಾದ್ವೈತ ಮತದಲ್ಲಿ ಮಹಾ ವಾಕ್ಯಗಳಿಗೆ ಲಕ್ಷಣಾರ್ಥವನ್ನು ಹೇಳುವದಿಲ್ಲ. ಪರಂತು ಮುಕ್ತಿಯಲ್ಲಿ ಅಭೇದವು ಸಂಗತವಾಗುತ್ತದಾದಕಾರಣ ಆ ಕಾಲದ ಅಬೇಧವನ್ನು ಮಹಾ ವಾಕ್ಯವು ಹೇಳುತ್ತದೆ. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಜೀವ ಶಿವರುಗಳ ಅಭೇದವು ವಿರುದ್ಧವಾಗುತ್ತದೆ. ಆದಕಾರಣ ಜೀವದಶೆಯಲ್ಲಿ ಭೇದವನ್ನು ಹೇಳುತ್ತೇವೆಯಾದಕಾರಣ, ಭೇದ ಶ್ರುತಿಗಳಿಗೆ ವಿರೋಧವಿಲ್ಲ. ಒಳ್ಳೇದು ಶಿವಾದ್ವೈತಿಯೇ! ಚಿತಿಶಕ್ತಿಸಂಕೋಚವಿಶಿಷ್ಟನೇ ಜೀವನೆನ್ನುವದು ಯಾರ ಮತವು? ನಿಮ್ಮ ಶಿವಾದ್ವೈತ ಮತದಲ್ಲಿ ಯಾವ ಪೂರ್ವಿಕರು ನಿನ್ನಂತೆ ಹೇಳಿರುವರು? ಅಂದರೆ ಎಲೈ ಬ್ರಹ್ಮಾದ್ವೈತಿಯೆ! ನಮ್ಮ ಮತದಲ್ಲಿ ಆಚಾರ್ಯರ ಅಭಿಪ್ರಾಯವೂ ಇರುತ್ತದೆ. ಇಲ್ಲದಿದ್ದರೆ ಶಿವಾದ್ವೈತವೇ ಸಂಭವಿಸಲಾರದು. ಇಗೋ ನೋಡು. ಮರಿತೋಂಟದಾರ್ಯರೆಂಬ ಉದ್ದಾಮ ಪಂಡಿತರೂ ಕೂಡ "ಚಿತಿಶಕ್ತಿಸಂಕೋಚ ಚಿತ್ತವಿಶಿಷ್ಟೋಜೀವಃ" ಎಂದು ಹೇಳಿರುವರು,

ದ್ವಪಾಶರಾಶೇ ರ್ಭರ್ಗರುದ್ರಸ್ಯ ವೀರಮಾಹೇಶ್ವರಸ್ಯ ಚಿಚ್ಛಕ್ತಿವಿಶಿಷ್ಟಸ್ಯ ಜೀವ ಸ್ಯಾತ್ಮನಃ ಸ್ವಶಕ್ತಿಸಂಕೋಚಕಲಾಯಾಅಪಿ ವಿಲೀನತ್ವಾತ್ ಕಥಮಸ್ಯಜೀವತ್ವಂ ಪುನಃ ಪ್ರತ್ಯವತಿಷ್ಠತೆ, ನಸ್ವಂತಃಕರಣವೃತ್ತೀನಾಮನಿತ್ಯತ್ವಾತ್ ವೃತ್ತೇಃ ಸ್ವ ವಿರೋಧಿವೃತ್ತಿ ಜನನಪರ್ಯಂತಂ ಸ್ಥಾಯಿತ್ವಾಭ್ಯುಪಗಮಾಚ್ಚ ಘಟಾದಿವೃತ್ತೇಶ್ಚ ನಿತ್ಯತ್ವೆ ಚಕ್ಷುಸ್ಸಂಯೋಗಾದೀನಾಂ ವೈಯರ್ಥ್ಯಾಪಾತಾಚ್ಚ | ಘಟಂ ದೃ ಷ್ಟ್ವಾಪಟಂಪಶ್ಯತಃ ಪುರುಷಸ್ಯ | ಪಟಜ್ಞಾನಕಾಲೆ ಘಟಜ್ಞಾನಪ್ರಸಂಗಾಚ್ಚಾ ನಿತ್ಯತ್ವಂ ವಕ್ತವ್ಯಂ. ತಥಾಚ ವೃತ್ತಿತ್ವ ವ್ಯಾಪ್ಯಬ್ರಹ್ಮಾಕಾರ ವೃತ್ತಿತ್ವಾವಚ್ಛಿನ್ನ ಸ್ಯಾಪ್ಯನಿತ್ಯತ್ವಾತ್ ಸಚ್ಚಿದಾನಂದಾ ದ್ವಿತೀಯಬ್ರಹ್ಮಾಹಮಸ್ಮೀತ್ಯಾಕಾರಕ ಬುದ್ಧಿಶಕ್ತಿ ವಿಶಿಷ್ಟತ್ವೇ ಬ್ರಹ್ಮಭೂತಸ್ಯಾಪ್ಯನಿತ್ಯತ್ವಂ ಸ್ಯಾತ್. ಸ್ಯಾಚ್ಚಭವದ ಭಿಮತ ಶಿವಾದ್ವೈತಸ್ಯಾಪಿ ಹಾನಿ ಸ್ತಸ್ಮಾದ್ಭವತಾಪಿ ತಾದೃಶವೃತ್ತೇರನಿತ್ಯತ್ವಂ ವಾಚ್ಯಮಿತಿಚೇನ್ನ | ಘಟಾದ್ಯಂತಃಕರಣವೃತ್ತೀನಾಂ ನಿತ್ಯತ್ವಾತ್ ಸ್ವವಿರೋಧಿ

---

ಚಿತ್ತವು ವಿಷಯವಾಸನೆಯಿಂ ಕೂಡಿದುದರಿಂದ ಆಯಾಯ ವಿಷಯಗಳ ಸಂಕಲ್ಪ, ವಿಕಲ್ಪ, ನಿಶ್ಚಯ, ಅಭಿಮಾನ ರೂಪಗಳಾದ ವ್ಯಾಪಾರಗಳುಳ್ಳದ್ದಾಗುವದು. ಇಂಥ ವ್ಯಾಪಾರಗಳುಳ್ಳ ಚಿತ್ತದಿಂದ ಕೂಡಿದವನಾದಕಾರಣ, ಜೀವನಿಗೆ ಬಂಧವು. ಚಿತ್ತವು ಬಾಹ್ಯ ವಿಷಯಗಳ ಕಡೆಗೆ ಹೋಗುವ ತನ್ನ ಸ್ವಭಾವವನ್ನು ಬಿಟ್ಟು, ಅಂತರ್ಮುಖವಾಗಿ ಶಿವಪದಾರೋಹಣಮಾಡಲುಪಕ್ರ ಮಿಸುತ್ತದೆ ಅಂದರೆ ಚಿತ್ತವನ್ನು ಒಳ್ಳೇ ಪ್ರಯತ್ನಪೂರ್ವಕವಾಗಿ ಸುಷುಮ್ನಾ ಮಾರ್ಗದಲ್ಲಿ ನಿಲ್ಲಿಸಿ ಆಮೇಲೆ ಆಚಾರ ಲಿಂಗದಲ್ಲಿರುವ ಆರು ಲಿಂಗಗಳಿಗೆ ಪೃಥಿವೀತತ್ವದೊಳಗಣ ಆರು ಭೂ ತಗಳ ಅಂಶಗಳನ್ನು ಸಮರಸಗೊಳಿಸಿ (ಅರ್ಪಣಮಾಡಿ) ಇದರಂತೆ ಮುಂದಣ ಐದು ಲಿಂಗಗಳಲ್ಲಿ ರುವ ಆರು ಲಿಂಗಗಳಿಗೆ ಜಲ ಮೊದಲಾದ ಐದು ಪದಾರ್ಥಗಳಲ್ಲಿರುವ ಆರು ಭಾಗಗಳನ್ನು ಅರ್ಪಣೆಮಾಡಿ ಆಮೇಲೆ ಉಳಿದ ಶುದ್ಧಗಳಾದ ಆರು ಪೃಥಿವೀಮೊದಲಾದ ತತ್ವಗಳೆಂಬ ಆಚಾ ರಾದಿ ಲಿಂಗ ಗ್ರಂಥಿಗಳನ್ನು ಭೇದಿಸಿ (ಅವುಗಳು ನಾನು ನನ್ನವೆಂಬಭಿಮಾನವನ್ನು ಬಿಟ್ಟು) ಅಂ ದರೆ ಮೊದಲು ನಿವೃತ್ತಿಕಲೆಯುಳ್ಳವನಾಗಲು ಸರ್ವಜ್ಞ ಬ್ರಹ್ಮನಾಗುವನು. ಆಗ ಆಚಾರಲಿಂಗದ ಪೂಜಕನಾಗಿರುವನು. ಇವನೇ ಭಕ್ತನು. ಈ ಭಕ್ತನೇ ಆಚಾರಲಿಂಗಪೂಜೆಗೆ ಅಧಿಕಾರಿಯು. ಈ ವಿಷಯವು ಮುಂದೆ ಮೋಕ್ಷಕಾಂಡದ ಷಡಂಗ ಯೋಗವಿಧಿಯನ್ನು ಹೇಳುವ ಕಾಲಕ್ಕೆ ವಿಸ್ತಾರವಾಗಿ ತಿಳಿಸುವೆವೆಂದು ಹೇಳಿರುವನು. ಅರ್ಥಾತ್ ಚಿತ್ತವು ಸುಷುಮ್ನಾ ಮಾರ್ಗದಿಂದ ಪ್ರಯಾಣಮಾಡುತ್ತ ಮಧ್ಯದಲ್ಲಿ ಬರುವ ಆಚಾರಲಿಂಗದ ಪೃಥಿವೀಯೆಂಬುವ ಕಗ್ಗಂಟನ್ನೂ, ಗುರುಲಿಂಗದ ಜಲವೆಂಬ ಗ್ರಂಥಿಯನ್ನೂ, ಶಿವಲಿಂಗದ ತೇಜಸ್ಸೆಂಬ ಗ್ರಂಥಿಯನ್ನೂ, ಚರಲಿಂಗದ ವಾಯು ಎಂಬ ಗ್ರಂಥಿಯನ್ನೂ, ಪ್ರಸಾದಲಿಂಗದ ಆಕಾಶವೆಂಬ ಗ್ರಂಥಿಯನ್ನೂ, ಮಹಾಲಿಂ ಗದ ಆತ್ಮರೂಪವಾದ ಚಿತ್ತವೆಂಬ ಗ್ರಂಥಿಯನ್ನೂ ಛೇದಿಸಿ. ದಾಂಟಿ, ಮೇಲಕ್ಕೇರಿ, ಇತ್ಯಾದಿ.

ವೃತ್ತ್ಯುತ್ಪತ್ತಿಕಾಲೆ ಸ್ವಸ್ಯಾಃ ಸಂಕುಚಿತತ್ವಾತ್ ಪಟವೃತ್ತ್ಯುತ್ಪತ್ತಿಕಾಲೇ ಘಟವೃತ್ತ್ಯಾವರಣನಾಶಾಭಾವಾತ್ ತನ್ನಾಶಕೇಂದ್ರಿಯವೃತ್ತ್ಯಭಾವಾತ್ ನತತ್ಕಾಲೆ ಘಟಜ್ಞಾನಪ್ರಸಂಗಃ | ಇಂದ್ರಿಯಸಂಯೋಗಾದೀನಾಮಪ್ಯಾವರಣಾಭಿಭವಾರ್ಥತ್ವಾಜ್ಞ್ಞಸಜಾನರ್ಥಕ್ಯಂ | ತೇಷಾಂ ಬ್ರಹ್ಮಣ್ಯಜ್ಞಾನನಾಶಾಯ ವೃತ್ತಿವ್ಯಾಪ್ತಿರಪೇಕ್ಷಿತಾ | ಇತ್ಯುಕ್ತ ಪ್ರಕಾರೇಣ ಭವತಾ ಯಥಾ ಬ್ರಹ್ಮಗತಾಜ್ಞಾನನಾಶಾಯ ವೃತ್ತಿವ್ಯಾಪ್ತಿರಪೇಕ್ಷ್ಯತೆ ತಥೈವ ಘಟಪ್ರಕಾಶಾವರಣನಾಶಾಯೈವಾಪೇಕ್ಷ್ಯತಾ ಮಿಂದ್ರಿಯವೃತ್ತಿರನ್ಯಥಾ ತತ್ಸ್ಮೃತೇರನುಪಪತ್ತಿಃ ಸ್ಯಾತ್. ಪೂರ್ವಾನುಭವಸ್ಯ ನಷ್ಟತ್ವಾತ್. ನಚಸಂಸ್ಕಾರೇಣೈವ ಸಾ ಉಪಪದ್ಯತ ಇತಿವಾಚ್ಯಂ

---

ಲಿಂಗಗಳ ಮೂರು ಶರೀರಗಳೆಂಬ ಗ್ರಂಥಿಗಳನ್ನು ಕೂಡಾ ಕತ್ತರಿಸಿ, ಸರ್ವಕ್ಕೂ ಊರ್ಧ್ವದೇಶದಲ್ಲಿರುವ ಊರ್ಧ್ವಲಿಂಗಾಯನಮಃ | ಎಂಬ ಶ್ರುತಿ ಪ್ರತಿಪಾದಕವಾದ ಭಾವಲಿಂಗದ ಊರ್ಧ್ವಾಯನಮಃ | ಎಂಬ ಶ್ರುತಿಯಿಂದ ಹೇಳಲ್ಪಡುವ ಚಿಚ್ಛಕ್ತಿ ಸ್ಥಾನವನ್ನು ಹೊಂದಿದಮೇಲೆ ಚಿಚ್ಛಕ್ತಿರೂಪವಾಗಿ ಬಿಡುವದು. ಆಗ ಈ ಜೀವನು ಜೀವಭಾವವನ್ನು ಬಿಟ್ಟು ಪರಶಿವ ಮಹಾಲಿಂಗದಲ್ಲಿ ಸಮರಸವನ್ನು ಹೊಂದುವನು. ಒಬ್ಬಾನೊಬ್ಬ ಮನುಷ್ಯನು ಆರು ಅಂತಸ್ತಿನಮೇಲ ಮಾಡಿಯನ್ನು ಹತ್ತುವದಕ್ಕೆ ಆ ಮಾಡೆಯ ಅಧಿಕಾರಿಯಿಂದ ಹುಕುಂ ಪಡೆದು, ಒಂದೊಂದು ಅಂತಸ್ತಿನ ಸಾವುಟಣಿಗೆಗಳನ್ನು ದಾಟಿ ಸಮೀಪಕ್ಕೆ ಹೋಗಿ ಅಲ್ಲಲ್ಲಿರುವ ಅಧಿಕಾರಿಯನ್ನೂ ವಿಚಿತ್ರ ಸಾಮಾನುಗಳನ್ನೂ ನೋಡಿ ಆನಂದಪಡುತ್ತಾ ಆರು ಅಂತಸ್ತಿನ ಮೇಲಿರುವ ಮೇಲು ಮಾಡೆಯೊಳಗೆ ಹೋಗಿ ಅಲ್ಲಿರುವ ದೊಡ್ಡದಾದ, ಸಣ್ಣದಾದ, ಅತಿ ಸಣ್ಣದಾದ ಮೂರು ಮನೆಯೊಳಗೆ ಹೊಕ್ಕು, ಅತಿ ಸಣ್ಣಗಿರುವ ಮನೆಯಲ್ಲಿ ವಾಸಮಾಡಿರುವ ಮಹಾರಾಜನನ್ನು ನೋಡಿ, ಅಲ್ಲಿರುವ ವಿಚಿತ್ರ ಪದಾರ್ಥಗಳಿಂದ ಅತ್ಯಾನಂದವನ್ನು ಹೊಂದುವಂತೆ, ಜೀವನಿಂದ ಕೂಡಿದ ಚಿತ್ತವು ಸುಷುಮ್ನಾ ಮಾರ್ಗದಿಂದ ಆರು ಚಕ್ರಗಳನ್ನು ದಾಟಿ, ಮೇಲು ಮಾಡಿಯಂತಿರುವ ಉತ್ತಮಾಂಗದಲ್ಲಿರುವ ಮೂರು ಸ್ಥಾನಗಳಲ್ಲಿರುವ ಮೂರು ಲಿಂಗಗಳಿಗೆ ತನ್ನ ಸ್ಥೂಲ ಸೂಕ್ಷ್ಮ ಕಾರಣ ಶರೀರಗಳೆಂಬ ಆವರಣಗಳನ್ನೂ ಕೂಡಾ ಛೇದಿಸಿ ದಾಟಿಹೋದಮೇಲೆ ಭಾವಲಿಂಗದ ಚಿತ್ತಸ್ಥಾನವು ಸಿಗುವದು. (ಚಿತ್ತವು ಸದಾಶಿವನ ಅಂತಃಕರಣ ಸ್ವರೂಪವಾಗುವದು.) ಅನಂತರದಲ್ಲಿ "ಅಸ್ಮಿನ್‌ಪ್ರಕಾಶೇಸಂದಾಮಿ" ಎಂಬ ಶ್ರುತಿಯಂತೆ ನಿತ್ಯಾನಂದ ಭೋಗಪರವಶನಾಗಿ ಬಿಡುವನು. ಆಗ ಜೀವಭಾವವು ತೊಲಗಿಹೋಗಿಬಿಡುವದು. ಯಾಕಂದರೆ ಜೀವಭಾವಕ್ಕೆ ಚಿತ್ತವೇ ಕಾರಣವು. ಆ ಚಿತ್ತಕ್ಕೆ ಚಿತಿಶಕ್ತಿ ಸಂಕೋಚವು ಕಾರಣವು. ಈ ಚಿಚ್ಛಕ್ತಿ ಸಂಕೋಚವೆಂಬ ಅಜ್ಞಾನ ಅಥವಾ ಅಖ್ಯಾತಿ ಎಂಬ ಕಳೆಯು ಕೂಡಾ ನಷ್ಟವಾಗಿ ಹೋದಮೇಲೆ ಆ ತನ್ನ ಸ್ವರೂಪನಾದ ಪರಶಿವನ ಸಾಕ್ಷಾತ್ಕಾರವಾದನಂತರ ಸಮಸ್ತ ಕ್ಷುದ್ರ ಪಾಶಗಳ ರಾಶಿಯು ಉಳುಮೆ ಇಲ್ಲದಂತೆ ನಷ್ಟವಾಗಿ ಹೋದಮೇಲೆ ಆ ಭೂರುದ್ರನಾದ ವೀರಮಾಹೇಶ್ವರನಿಗೆ ಪುನಃ ಬಂಧವೆಲ್ಲಿ? ಅವನು ಮುಕ್ತನೇ ಆಗಿ

ಸಮಾನ ವಿಷಯಯೋಃ ಸಂಸ್ಕಾರಾನುಭವಯೋರೇಕಸ್ಯ ವಿನಾಶೋ ಪರಸ್ಯತದ ಭಾವಇತಿ ವಕ್ತವ್ಯತ್ವೆ ವಿನಿಗಮನಾವಿರಹಾತ್ | ನಿಷ್ಪಕ್ಷಪಾತಿನಾಭವತಾ ತದುಭಯಸ್ಯಾಪಿ ಸ್ವವಿರೋಧಿವಸ್ತೂತ್ಪತ್ತೌ ನಾಶಃ ಸ್ವೀಕಾರ್ಯಃ ಖಲು ತತ್ಸ್ವೀಕಾರೆ ಸ್ಮೃತೆರಾಕಸ್ಮಿಕತ್ವಾಪತ್ತಿಃ ಸ್ಯಾತ್ | ಸಚಫಲಬಲಕಲ್ಪ್ಯಂ ಸಂಸ್ಕಾರಸ್ಯ ಕಾರಣತ್ವಮಿತಿ ಚೇದನುಭವಸ್ಯೈವ ತತ್ಕಲ್ಪ್ಯತಾಂ | ಅವಾಂತರಸಂಸ್ಕಾರಕಲ್ಪನಸ್ಯಾಕಿಂಚಿತ್ಕರತ್ವಾತ್ | ಸಂಸ್ಕಾರಾಸತ್ವೇಪ್ಯುದ್ಬೋಧಕವಶಾದನುಭವೇನೈವ ಸ್ಮೃತಿಸಂಭವೆ ತಸ್ಯಕಾರಣತಾಗ್ರಾಹಕಸಾಮಗ್ರ್ಯಭಾವಾತ್ ತಸ್ಮಾದ್ವೃತ್ಯನಿತ್ಯತ್ವ ವಾದೊಯುಕ್ತಃ | ಕಿಂಚ ಭೊ ವೃತ್ಯನಿತ್ಯತ್ವವಾದಿನ್|

---

ಬಿಡುವನು. ಒಳ್ಳೇದು ವೀರಶೈವಾ! ಸರ್ವಾತ್ಮಕನಾದ ಶಿವನೇ ನಾನು ಎಂಬ ಚಿಚ್ಛಕ್ತಿಯೆಂಬ ವೃತ್ತಿಯು ನಿತ್ಯವಾದದ್ದು ಇದುವೇ ಸ್ವರೂಪಾನಂದದ ಅನುಭವಕ್ಕೆ ಕಾರಣವಾದದ್ದು ಎಂದು ಹೇಳುವೆಯಲ್ಲವೆ? ಅಂತಃಕರಣದ ಎಲ್ಲಾ ವೃತ್ತಿಗಳೂ ಅನಿತ್ಯಗಳೇ ಆಗಿರುವುವು. ಇದು ಆಬಾಲವೃದ್ಧರ ಅನುಭವಕ್ಕೂ ಬರುವ ಮಾತು. ಯಾಕೆಂದರೆ, ಇದು ಘಟವು ಎಂಬ ವೃತ್ತಿಯು. ಇದು ಪಟವು ಎಂಬ ವೃತ್ತಿಯು ಹುಟ್ಟುವವರಿಗೂ ಇದ್ದು ತನಗೆ ವಿರೋಧಿಯಾದ ಪಟವೃತ್ತಿಯು ಹುಟ್ಟಿದ ಕೂಡಲೆ ನಾಶವಾಗುವದು ಎಂದು ನಮ್ಮ ಬ್ರಹ್ಮಾದ್ವೈತಮತವು ನಿನ್ನೀ ಶಿವಾದ್ವೈತಮತದಲ್ಲಿ ನೀನು ವೃತ್ತಿಗಳು ನಿತ್ಯಗಳೆಂದರೆ, ಚಕ್ಷುಃ ಸಂಯೋಗಾದಿಗಳು ಯಾತಕ್ಕೆ ಬೇಕು? ಅವುಗಳು ವ್ಯರ್ಥಗಳು ಆಗಬೇಕು. ಮತ್ತು ಘಟವನ್ನು ನೋಡಿ ಪಟವನ್ನು ನೋಡುವ ಪುರುಷನಿಗೆ ಪಟಜ್ಞಾನಕಾಲದಲ್ಲಿ ಘಟಜ್ಞಾನವಾದರೂ ಆಗಬೇಕು. ಘಟಜ್ಞಾನವು ನಿತ್ಯವಾಗಿದ್ದಮೇಲೆ ಪಟಜ್ಞಾನಕಾಲದಲ್ಲಿಯೇ ಘಟಜ್ಞಾನವು ಯಾಕೆ ಆಗಬಾರದು. ಅದು ಆದದ್ದು ಸರ್ವರ ಅನುಭವಕ್ಕೆ ಯಾಕೆ ಬರಬಾರದು. ಅಂದರೆ ವೃತ್ತಿಗಳೆಲ್ಲವೂ ತಮಗೆ ವಿರೋಧವೃತ್ತಿಗಳುಹುಟ್ಟುವವರಿಗೂ (ಎರಡು ಕ್ಷಣದವರಿಗೂ) ಇದ್ದು ಆಮೇಲೆ ನಾಶಹೊಂದುತ್ತವೆಂದು ಸಿದ್ಧವಾಗುತ್ತದೆ. ವೃತ್ತಿಗಳೆಲ್ಲಕ್ಕೂ ಈ ಪ್ರಕಾರವಾಗಿ ಅನಿತ್ಯತ್ವವು ಸಿದ್ಧವಾಗಲು ಬ್ರಹ್ಮಾಕಾರವೃತ್ತಿಯಾದರೂ ಅನಿತ್ಯವೆಂದು ಸುತರಾಂ ಸಿದ್ಧವಾಯಿತು. ಇಂಥ ಅನಿತ್ಯವಾದ ಸಚ್ಚಿದಾನಂದೋಽಹಂ', ಎಂಬುವ ಬ್ರಹ್ಮಾಕಾರವಾದ ಬುದ್ಧಿ ಶಕ್ತಿಯ ವಿಶಿಷ್ಟತನವನ್ನು ಬ್ರಹ್ಮಭೂತನಾದ ಜೀವನ್ಮುಕ್ತನಿಗೆ ಹೇಳಿದರೆ, ಅವನಿಗೂ ಅನಿತ್ಯನೆನ್ನಬೇಕಾದೀತು. ಮತ್ತು ಆ ಮುಕ್ತಿಯ ಅವಸ್ಥೆಯಲ್ಲಿ ಅದೊಂದು ವೃತ್ತಿಯು ನಿತ್ಯವಾಗಿದ್ದರೆ ನಿನ್ನ ಶಿವಾದ್ವೈತವಾದರೂ ಎಲ್ಲಿ ಉಳಿಯಿತು! ಅದಕ್ಕೆ ಹಾನಿಯಾಗಲಿಲ್ಲವೆ? ಆದ್ದರಿಂದ ನಿನ್ನ ಶಿವಾದ್ವೈತ ಮತವನ್ನಾದರೂ ಉಳಿಸಿಕೊಳ್ಳಲಿಕ್ಕೆ ವೃತ್ತಿಗೆ ಅನಿತ್ಯವೆಂದು ಹೇಳಬೇಕಷ್ಟೆ! ಅಂದರೆ ಎಲ್ಲಿ ಬ್ರಹ್ಮಾದ್ವೈತಿಯೇ! ಅಂತಃಕರಣ ವೃತ್ತಿಗಳೆಲ್ಲವೂ ನಮ್ಮ ಮತದಲ್ಲಿ ನಿತ್ಯಗಳಾಗಿರುವುವು. ವೃತ್ತಿಗಳು ತಮಗೆ ವಿರೋಧಿವೃತ್ತಿಗಳುದಯವಾದ ಕಾಲಕ್ಕೆ ಸಂಕುಚಿತಗಳಾಗಿರುವುವು. ನಷ್ಟಗಳೇ ಆಗುವದಿಲ್ಲಾ. ಇನ್ನು ಪಟಜ್ಞಾನಕಾಲದಲ್ಲಿ ಘಟಜ್ಞಾನವಾಗುವದಿಲ್ಲವೇಕೆ? ನಿನ್ನ ಘಟವೃತ್ತಿ

ಅಹಂಬ್ರಹ್ಮಾಸ್ಮೀತಿವೃತ್ತೇ ರ್ವಿರೋಧಿವೃತ್ತೇರಭಾವಾತ್ಕಥಂ ತನ್ನಾಶಂಬ್ರವೀಷಿ | ನಚಸ್ವಾತ್ಮನಾಶೋ ಸ್ವೇನೈವಭವತೀತಿವಾಚ್ಯಂ | ನಾಶನಿರೂಪಿತ ಕಾರಣತಾಯಾಃ ನಾಶಪ್ರತಿಯೋಗ್ಯತಿರಿಕ್ತೇಪಿ ನಿಯಮೇನ ವಿದ್ಯಮಾನತ್ವಾತ್ | ನಹಿಘಟಾದೀನಾಂ ನಾಶೋ ಘಟಾದಿನೈವ ಭವತಿ ನಚಕಾಷ್ಠಾದಿಜನಿತೋಗ್ನಿಃ ಕಾಷ್ಠಾದಿಕಂದಗ್ಧ್ವಾ ಸ್ವಯಮೇವೋಪಶಾಮ್ಯತೀತಿವಾಚ್ಯಂ | ತತ್ರಾಪಿ ವಾಯುಃಕಾಲಾದೀನಾಂ ನಿಯಮೇನಕಾರಣತ್ವಸ್ಯವಕ್ತವ್ಯತ್ವಾತ್ | ನಹಿ ತ್ವನ್ಮತೇ ಸಕಾರ್ಯಾಜ್ಞಾನನಾಶೋತ್ತರಂ ಚೈತನ್ಯಮಂತರಾ ಕಶ್ಚಿದ್ವಾಕ್ಯಜನ್ಯವೃತ್ತ್ಯತಿರಿಕ್ತಪದಾರ್ಥೋ ವಿದ್ಯತೇ | ಕಿಂಕೃತಂ ಭವತಾ ಶ್ರವಣಾದಿ ಪ್ರಯಾಸೇನ, ಯದರ್ಥಂ ಶ್ರವಣಾನುಷ್ಠಾನಂ, ತನ್ನಾಶೇ ನಿಷ್ಫಲಶ್ರಮೋಭವೇತ್| ಅನೇಕಸಾಧನಸಂಪ್ರಾ

---

ಯು ನಿತ್ಯವೆಂದು ಕೇಳುತ್ತಿಯಲ್ಲವೆ? ನೋಡು, ಪಟವೃತ್ತಿಯ ಉದಯಕಾಲದಲ್ಲಿ ಘಟವೃತ್ತಿಯ ಆವರಣವು ನಾಶವಾಗದಿರುವಮೂಲಕ ಘಟವೃತ್ತಿಯು ಅನುಭವಕ್ಕೆ ಬರುವದಿಲ್ಲ. ಆ ಆವರಣ ನಾಶವನ್ನುಂಟುಮಾಡುವ ಘಟೇಂದ್ರಿಯ ಸಂಯೋಗವು ಪಟಜ್ಞಾನಕಾಲದಲ್ಲಿ ಇಲ್ಲದಿರುವದರಿಂದ ಘಟವೃತ್ತಿಯು ನಿತ್ಯವಾಗಿದ್ದರೂ ಪಟವೃತ್ತಿಯ ಕಾಲದಲ್ಲಿ ಘಟವೃತ್ತಿಯ ಅನುಭವವಾಗುವದಿಲ್ಲ. ಇಂದ್ರಿಯ ಸಂಯೋಗ ಮೊದಲಾದವುಗಳು ಆಯಾಯ ಅಂತಃಕರಣ ವೃತ್ತಿಗಳ ಆವರಣವನ್ನು ನಾಶಮಾಡತಕ್ಕವುಗಳಾದುದರಿಂದ ಅವುಗಳಿಗೆ ಆವರಣ ನಾಶರೂಪವಾದ ಪ್ರಯೋಜನವುಂಟು. ಆದ್ದರಿಂದ ಇಂದ್ರಿಯ ಸಂಯೋಗಾದಿಗಳು ನಿರರ್ಥಕಗಳಾಗುವದಿಲ್ಲ. ವೃತ್ತಿಗಳು ಅನಿತ್ಯಗಳೆನ್ನುವ ಎಲೈ ಅದ್ವೈತವಾದಿಯೆ! ಅಪರೋಕ್ಷರೂಪವಾದ ಬ್ರಹ್ಮದ ಆವರಣವಾದ ಅಜ್ಞಾನದ ನಾಶಕ್ಕಾಗಿ ತತ್ವಮಸ್ಯಾದಿ ವಾಕ್ಯಜನ್ಯವೃತ್ತಿಯನ್ನು ಸ್ವೀಕರಿಸುವಂತೆ ಘಟ ಪ್ರಕಾಶಕ್ಕೆ ಆವರಕವಾದ ಆವರಣ ನಾಶಕ್ಕಾಗಿ ಇಂದ್ರಿಯ ವೃತ್ತಿಯನ್ನು ಸ್ವೀಕರಿಸಬೇಕಾಗುತ್ತದೆನ್ನುವ ಮಾತು ನಿನಗೆ ಯಾಕೆ ತಿಳಿಯಬಾರದು? ಘಟ ಮೊದಲಾದ ಅಂತಃಕರಣವೃತ್ತಿಗಳು ನಿತ್ಯಗಳಿದ್ದರೂ ಅವುಗಳ ಆವರಣ ನಾಶಕ್ಕಾಗಿ ಇಂದ್ರಿಯ ವೃತ್ತಿಗಳು ಬೇಕೇ ಬೇಕೆಂದು ತಿಳಿಯದೇ. ಇಂದ್ರಿಗಳೂ ಇಂದ್ರಿಯ ಸಂಯೋಗಗಳೂ ಯಾತಕ್ಕೆ ಬೇಕೆಂದು ಕೇಳುವದು ಹುಚ್ಚತನವಲ್ಲವೇ? ಎಲೈ ವೃತ್ಯನಿತ್ಯವಾದಿಯೆ! ಘಟಾನುಭವ ಪಟಾನುಭವ ರೂಪಗಳಾದ ವೃತ್ತಿಗಳು ಅನಿತ್ಯಗಳು. ಅವು ಮುಂದೊಂದು ಬೇರೆ ವೃತ್ತಿಯು ಹುಟ್ಟಿದ ಕೂಡಲೆ ನಷ್ಟಗಳಾಗುವುವು ಎಂದು ನೀನು ಒಪ್ಪಿಕೊಂಡರೆ ಆ ಘಟಾದಿಗಳ ಸ್ಮೃತಿಯ ಉತ್ಪತ್ತಿಯನ್ನು ಯಾವದರಿಂದ ಹೇಳುವಿ? ಅಂದರೆ ಶಿವಾದ್ವೈತಿಯೆ! ಘಟಾನುಭವವು ನಷ್ಟವಾದರೂ ಆ ಅನುಭವದಿಂದುಂಟಾದ ಸಂಸ್ಕಾರದಿಂದ ಹೇಳುವೆನು. ಇದರಂತೆ ತಾರ್ಕಿಕರೂ ಕೂಡಾ ಹೇಳುತ್ತಾರಲ್ಲವೆ? ಎಲೆ ಬ್ರಹ್ಮಾದ್ವೈತಿಯೆ! ನೀನು ನಿಷ್ಪಕ್ಷಪಾತಿಯಲ್ಲವೆ? ಆ ಘಟಾನುಭವಕ್ಕೂ ಘಟಾನುಭವದಿಂದುಂಟಾದ ಸಂಸ್ಕಾರಕ್ಕೂ ವಿಷಯವು ಯಾವುದು ಹೇಳು; ಘಟವೇ ಅಲ್ಲವೆ? ಘಟವಿಷಯಕವಾದ ಅನುಭವವು ತನಗೆ ವಿರೋಧಿಯಾದ ಮತ್ತೊಂದು ವೃತ್ತಿ

ಪ್ತ್ಯಾಂತಿಮ ಸಚ್ಚಿದಾನಂದಾದಿ ಬುದ್ಧಿಶಕ್ತಿರೂಪವೃತ್ತೇರಪಿನಾಶಸ್ಸ್ವೀಕಾರೇಸ್ವಸ್ಯ ಸಚ್ಚಿದಾನಂದಾದಿ ಸ್ವರೂಪಸದ್ಭಾವೇಪಿಕಿಂಫಲಂ । ನಪಿಕಿಂಚಿತ್ಫಲಂ ರಮಣೀ ವಿರಹಿತತ್ವೇರಮಣೀಯಕೇಳೀಗೃಹರಾಮಣೀಯಕತಾಯಾಃ । ನಹ್ಯುನ್ಮತ್ತಜ ನಸ್ಯ ವಿವೇಕಬುದ್ಧಿಶೂನ್ಯಸ್ಯ ಸದುಪದೇಶಾದಿನಾ ಕಿಂಚಿತ್ಫಲಂ ಪಶ್ಯಾಮಃ। ಕಿಂಬಧಿರಸ್ಯ ಸಂಗೀತಶ್ರವಣೇನ, ಕಿಂವಾಪ್ರಯೋಜನಮಂಧಸ್ಯ ಸ್ವಸ್ವರೂಪಲಾ ವಣ್ಯಾದಿನಾ, ಪಾಷಾಣಾದೇಃ ಸ್ವಸ್ವರೂಪಾಕಾರಾನುಭವರೂಪ ವೃತ್ತ್ಯಭಾವಾ ಜ್ಜಡತ್ವಮಿವ ಜೀವನ್ಮುಕ್ತಸ್ಯ ಸ್ವಸ್ವರೂಪಾನಂದಾದಿವೃತ್ತಿನಾಶೆ ಜಡತ್ವಂಸ್ಯಾ ತ್ ಸ್ಯಾಚ್ಚ ಕೈವಲ್ಯೋಪನಿಷದುಕ್ತಸ್ಯ "ಚಿನ್ಮಾತ್ರೋಹಂ ಸದಾಶಿವಃ" ಇತ್ಯ

---

ಯು ಹುಟ್ಟಲಾಗಿ ನಾಶವಾಗುವದೆಂತಲೂ, ಆ ಘಟ ವಿಷಯುಕವಾದ ಸಂಸ್ಕಾರವು ನಾಶವಾ ಗುವದಿಲ್ಲವೆಂತಲೂ ಹೇಳುವದು ಪಕ್ಷಪಾತವಾಗುವದಿಲ್ಲವೇ ? ಆ ಘಟಾನುಭವವು ಮಾಡಿದ ತಪ್ಪೇನು ? ಘಟಾನುಭವವು ನಷ್ಟವಾಗುತ್ತದೆ. ಘಟಸಂಸ್ಕಾರವು ನಷ್ಟವಾಗುವದಿಲ್ಲವೆನ್ನು ವಲ್ಲಿ ಯಾವ ಯುಕ್ತಿಯನ್ನು ಹೇಳುವಿ ? ಯಾವ ಯುಕ್ತಿಯೂ ಇಲ್ಲವೆಂದರೆ ಆ ಅನುಭವ ಸಂಸ್ಕಾರಗಳೆರಡಕ್ಕೂ ನಾಶವನ್ನು ಹೇಳಬೇಕಾಗುವದು. ಹೇಳಿದರೆ ತಂದೆಯಿಲ್ಲದೇ ಮಗನು ಹುಟ್ಟಿದನೇನು? ಹಾಗೆ ಕಾರಣವಿಲ್ಲದೇ ಸ್ಮೃತಿಯೂ ಹುಟ್ಟಬೇಕಾದೀತು. ಎಲ್ಲಿ ವೃತ್ತಿನಿಶ್ಯತ್ತ ವಾದಿಯೇ ಕೇಳು. ಆ ಸ್ಮೃತಿಯೆಂಬ ಕಾರ್ಯವು ಕಂಡುಬರುವದರಿಂದ ಅದಕ್ಕೆ ಕಾರಣ ವಂದನ್ನು ಹೇಳಲೇಬೇಕು. ಸಂಸ್ಕಾರವಂದನ್ನು ಬಿಟ್ಟರೆ ಮತ್ತಾವ ಗತಿಯೂ ಇಲ್ಲದಕಾರಣ ಸಂಸ್ಕಾರವೇ ಕಾರಣವೆಂದು ಹೇಳುವೆನು. ಇದಕ್ಕೆ ನಿನ್ನ ಆಕ್ಷೇಪಣೆ ಏನು ಹೇಳು? ಅಂದರೆ— ಅನುಭವಕ್ಕೇನೇ ಕಾರಣವೆಂದು ಏಕೆ ಹೇಳಬಾರದು ? ಎಲೈ ಶಿವಾದ್ವೈತಿಯೆ! ಅನುಭವವು ಮೊದಲೇ ನಷ್ಟವಾಗಿದೆ. ಅದು ಸ್ಮೃತಿ ಹುಟ್ಟುವ ಪೂರ್ವಕ್ಷಣದಲ್ಲಿ ಇಲ್ಲವೇ ಇಲ್ಲ. ತಂದೆಯು ಸತ್ತಮೇಲೆ ಮಗನು ಹುಟ್ಟಿದರೆ ವ್ಯಭಿಚಾರದೋಷವನ್ನು ಹೇಳುವಂತೆ, ನಿನ್ನ ಅನುಭವವು ಸತ್ತ ಮೇಲೆ ಸ್ಮೃತಿಯೆಂಬ ಕಾರ್ಯವನ್ನು ಹೇಗೆ ಹೇಳುವಿ. ಅಂದರೆ ಎಲೈ ಬ್ರಹ್ಮಾದ್ವೈತಿಯೇ! ಸಂಸ್ಕಾರವೂ ಕೂಡ ನಷ್ಟವಾಗಿದೆ. ಅದಕ್ಕಾದರೂ ನೀನು ಹೇಗೆ ಹೇಳುವಿ ? ಇದೆಂಥ ನಿನ್ನ ಪಕ್ಷಪಾತವು. ಓಲೈದು ಶಿವಾದ್ವೈತಿಯೇ! ಸ್ಮೃತಿಯನ್ನು ಹೇಗೆ ಯುಕ್ತವನ್ನಾಗಿ ಮಾ ಡುವಿ? ನಿನ್ನ ಅಭಿಪ್ರಾಯವನ್ನಾದರೂ ಹೇಳು ಅಂದರೆ ಬ್ರಹ್ಮಾದ್ವೈತಿಯೇ! ನೋಡು. ಪೂರ್ವಾನುಭವದಿಂದಲೇ ಸ್ಮೃತಿಯು ಆಗುತ್ತದೆಂದು ನಾನು ಹೇಳುವೆನು. ಪರಂತು ಆ ಪೂ ರ್ವಾನುಭವವು ಬೇರೆ ವೃತ್ತಿ ಹುಟ್ಟಿದ ಕಾಲಕ್ಕೆ ಸಂಕುಚಿತವಾಗಿದ್ದು ಮುಂದೆ ಕೆಲವು ಕಾಲದ ಮೇಲೆ ಯಾವದಾದರೊಂದು ಉದ್ಬೋಧಕ ವಶದಿಂದ ತಾನೇ ಸ್ಮೃತಿರೂಪವಾಗಿ ಪರಿಣಮಿಸು ವದು ಎಂದು ಹೇಳಿದರೆ ಸಾಕು. ಇದರ ಮೇಲೆ ಯಾವ ಆಕ್ಷೇಪಣೆಯೂ ಇಲ್ಲ. ಆ ಸ್ಮೃತಿ ನಿರ್ವಾಹಕ್ಕಾಗಿ ಬೇರೆ ಮತ್ತೊಂದು ಅವಾಂತರ ಸಂಸ್ಕಾರವನ್ನು ಕಲ್ಪಿಸಬೇಕು. ಪೂರ್ವಾನು

ಭಿನಯಪುರಃಸರಂ ಮುಕ್ತ್ವಾ ಪರಮೇಶ್ವರೇ ವ್ಯವಹಾರಸ್ಯಾಸಂಗತ್ಯಂ । ನಚಶರೀರ
ಪಾತಾನಂತರಂ ತಾದೃಶವೃತ್ತಿನಾಶಾಭ್ಯುಪಗಮಾತ್ । ನತದ್ವ್ಯವಹಾರಸ್ಯಾ
ಸಂಗತಿರಿತಿವಾಚ್ಯಂ । ಪುನಸ್ತಾದೃಶವೃತ್ತಿ ಸಂಪಾದನಾಯ ಪೂರ್ವಸ್ಮಿನ್ನಿವಕ
ರ್ಮಾದ್ಯನುವರ್ತನ ಪ್ರಸಂಗಾತ್ ತಸ್ಮಾನ್ನಾನಿತ್ಯತ್ವಂ ವೃತ್ತೀನಾಂವಕ್ತವ್ಯಂ।
ತಥಾಚಬುದ್ಧಿ ಶಕ್ತೇರ್ನಿತ್ಯತ್ವಾತ್ ನತದ್ವಿಶಿಷ್ಯಸ್ಯಾನಿತ್ಯತ್ವಂ । ಪರಾಹಂತಾಮ
ಯ ಸ್ವರೂಪಾನಂದಾದಿ ಕಲ್ಯಾಣಗುಣರತ್ನರತ್ನಾಕರವಿಷಯಿಣೀಂ ಪ್ರತ್ಯಕ್ಷಾ
ನುಭವರೂಪಾಂ ಬುದ್ಧಿಶಕ್ತಿ ವಿಕಾಸರೂಪಚಿಚ್ಛಕ್ತಿಂ ಪಾರಮೇಶ್ವರೀಂ ಪ್ರವಿಷ್ಟಃ
ಪ್ರತಿಬುದ್ಧೋಽಮೃತತ್ವಂ ವಿಂದತಿ । ಉಕ್ತಂಚ ರೇಣುಕಾಗಸ್ತ್ಯಸಂವಾದೇ ॥
ಗಳಿತೇ ಮಮತಾಹಂತೇ ಸಂಸಾರಭ್ರಮಕಾರಣೇ ಪರಾಹಂತಾಂ ಪ್ರವಿಷ್ಟಸ್ಯಕು

---

ಭವದ ನಾಶವನ್ನು ಹೇಳಬೇಕು. ಮುಂದೆ ಬೇರೊಂದು ಸ್ಮೃತಿರೂಪಕಾರ್ಯವನ್ನು ಒಪ್ಪಲೇ
ಬೇಕು. ಇಷ್ಟೆಲ್ಲಾ ಗೌರವವು ಯಾತಕ್ಕೆ ಬೇಕು? ಪೂರ್ವವೃತ್ತಿಗಳೇ ನಿತ್ಯವೆಂದು ಹೇಳಿದರೆ
ಯಾವ ತೊಂದರೆಯೂ ಇಲ್ಲಾ. ಆದ್ದರಿಂದ ನಮ್ಮ ಶಿವಾದ್ವೈತ ಮತದಲ್ಲಿ ಎಲ್ಲಾ ಅಂತಃಕರ
ಣವೃತ್ತಿಗಳು ನಿತ್ಯಗಳು. ಸರ್ವಾತ್ಮಕ ಶಿವನೇ ನಾನೆಂಬ ವೃತ್ತಿಯೂ ಕೂಡಾ ನಿತ್ಯವಾದದ್ದು
ಎಂದು ಹೇಳುವದು ಯುಕ್ತವಾಗಿದೆ. ಸಂಸ್ಕಾರವಿಲ್ಲದಿದ್ದರೂ ಸ್ಮೃತಿಯು ಸಂಭವಿಸುತ್ತದೆಂ
ದಮೇಲೆ ಸಂಸ್ಕಾರವು ಕಾರಣವೆನ್ನುವಲ್ಲಿ ಯಾವ ಯುಕ್ತಿಯೂ ಇಲ್ಲಾ ಆದುದರಿಂದ ವೃತ್ತಿ
ಗಳು ಅನಿತ್ಯವೆನ್ನುವದು ಸಮಂಜಸವಲ್ಲಾ.

ಎಲೈ ವೃತ್ತ್ಯನಿತ್ಯತ್ವವಾದಿಯೇ! ಬಹುದಿವಸ ಶ್ರಮ ವಹಿಸಿ ಪಡೆದ ಅಂತಿಮವಾದ ತತ್ವ
ಮಸ್ಯಾದಿ ವಾಕ್ಯಜನ್ಯವಾದ ನಾನು ಬ್ರಹ್ಮನೆಂಬುವ ಅಖಂಡಾಕಾರವಾದ ವೃತ್ತಿಗೆ ಮತ್ತೊಂ
ದು ವಿರೋಧಿವೃತ್ತಿಯು ಇಲ್ಲದಿರುವದರಿಂದ ಅದರ ನಾಶವನ್ನು ಹೇಗೆ ಹೇಳುತ್ತಿ? ಅದು ನಷ್ಟ
ವಾಗದಿದ್ದರೆ ನಿನ್ನ ಅದ್ವೈತಕ್ಕೆ ಹಾನಿಯಾಗುವದಿಲ್ಲವೆ? ಆ ಬ್ರಹ್ಮಾಕಾರವೃತ್ತಿಯು ತನ್ನಿಂದ
ತಾನೇ ನಷ್ಟವಾಗಲಾರದು. ನಾಶವೆಂಬ ಕಾರ್ಯಕ್ಕೆ ಬೇರೆ ಕಾರಣಗಳು ಬೇಕೇಬೇಕು.
ಘಟ ನಾಶವಾಗಬೇಕಾದರೆ ಘಟಕ್ಕಿಂತಲೂ ಬೇರೆಯಾದ ದಂಡಾದಿ ಕಾರಣಗಳು ಇದ್ದೇ ಇರ
ಬೇಕು. ಕೇವಲ ಘಟದಿಂದಲೆ ಘಟದ ನಾಶವಾಗಲಾರದು. ಅದರಂತೆ ಆ ಅಂತಿಮವೃತ್ತಿಯ
ನಾಶಕ್ಕೆ ಬೇರೆ ಕಾರಣವನ್ನು ತೋರಿಸಬೇಕಲ್ಲವೆ? ಅರಣ್ಯದಲ್ಲಿ ಕಾಷ್ಠಗಳಿಂದ ಹುಟ್ಟಿದ ಅಗ್ನಿ
ಯು ಆ ಕಾಷ್ಠವನ್ನೇ ನಾಶಮಾಡಿ ತನ್ನಿಂದ ತಾನೇ ನಷ್ಟವಾಗುವಂತೆ, ನಾನು ಬ್ರಹ್ಮನೆಂಬುವ
ವೃತ್ತಿಯು ಅಜ್ಞಾನದಿಂದ ಹುಟ್ಟಿ ಆ ಅಜ್ಞಾನವನ್ನೇ ನಾಶಮಾಡಿ, ತನ್ನಿಂದ ತಾನೇ ನಾಶ
ವಾಗುತ್ತದೆ, ಅಂದರೆ ಇದು ಲೋಕಾನುಭವವಿರುದ್ಧವು. ಅರಣ್ಯದಲ್ಲಿ ಅಗ್ನಿಯ ನಾಶವಾದ
ರೂ ಕಾರಣವಿಲ್ಲದೇ ಆಗುವದೆಂದು ಹೇಳಲಿಕ್ಕೆ ಬರುವದಿಲ್ಲಾ. ಕಾರಣವಿಲ್ಲದೆ ಕಾರ್ಯವಾ
ಗಲಾರದು, ಅಲ್ಲಿಯಾದರೂ ವಾಯುಕಾಲಾದಿಗಳು ಕಾರಣವೆಂದು ಹೇಳುತ್ತೇವೆಂದಮೇಲೆ

ಶೋದೇಹಃ ಕುತೋರತಿಃ| ಇತಿ. ಉಕ್ತಂಚ ಭಟ್ಟ ಶ್ರೀಕಲ್ಲಟಾಚಾರ್ಯೇಣಾಪಿ|| ಇಯಮೇವಾಮೃತಪ್ರಾಪ್ತಿರಿಯಮೇವಾತ್ಮನೋಗ್ರಹಃ | ಇಯಂ ನಿರ್ವಾಣ ದೀಕ್ಷಾಚ ಶಿವಸದ್ಭಾವದಾಯಿನೀ || ಇತಿ ಉಕ್ತಂಚೈತತ್ ಟೀಕಾಕಾರೇಣೋ ತ್ಪಲಾಚಾರ್ಯೇಣ || ಯೇಯಂಸ್ವರೂಪಸಂವಿತ್ತಿಃ ಸಾಮೃತಾಪ್ತಿರಿಹಾತ್ಮನಃ.| ಜರಾಮರಣವಿಚ್ಛೇದಾತ್ ........ನಿರ್ವಾಣದೀಕ್ಷಾತಚ್ಛೇಯಂ ಪರಮಾತ್ಮನಿ ಯೋಜಿಕಾ || ಉಕ್ತಂಚಮೋಕ್ಷಧರ್ಮೇಷು || ಹಿತ್ವಾತು ಸರ್ವಸಂಕಲ್ಪಾನ್ ಸತ್ವೇಚಿತ್ತಂ ನಿವೇಶಯೇತ್ | ಸತ್ವೇಚಿತ್ತಂ ಯದಾಲೀನಂ ತದಾಕಾಲಂ ಜಯೊ ಭವೇತ್ || ಇತಿ ದೀಕ್ಷಾರ್ಥೋಯಂ || ದದಾತಿಜ್ಞಾನಸದ್ಭಾವಂಕ್ಷಪಯತ್ಯ

---

ಈ ನಿನ್ನ ವೃತ್ತಿಯ ನಾಶಕ್ಕೆ ಬೇರೆ ಕಾರಣವನ್ನು ತೋರಿಸಬೇಕಾಗುತ್ತಿದೆ. ಆಗೆ ಕಾರ್ಯ ದಿಂದ ಸಹಿತವಾಗಿ ಅಜ್ಞಾನವು ನಷ್ಟವಾದಮೇಲೆ ಬ್ರಹ್ಮವಂದನ್ನು ಬಿಟ್ಟು, ಬೇರೆ ಯಾವ ಪದಾರ್ಥವೂ ಆ ವೃತ್ತಿನಾಶವನ್ನುಂಟುಮಾಡುವುದಿಲ್ಲವು. ಎಲ್ಲಿ ವೃತ್ತ್ಯನಿತ್ಯತ್ವವಾದಿಯೆ! ಯಾವ ವೃತ್ತಿಗೋಸ್ಕರವಾಗಿ ಶ್ರವಣಾದಿ ಅನುಷ್ಠಾನವು ಮಾಡಲ್ಪಟ್ಟಿತೋ ಅಂಥ ವೃತ್ತಿಯೇ ನಷ್ಟವಾದಲ್ಲಿ ಆ ಶ್ರವಣಾದಿಗಳಿಗೆ ಪ್ರಯೋಜನವೇನು? ಆದುದರಿಂದ ನಿನ್ನ ಶ್ರಮವು ವ್ಯರ್ಥ ವಾಯಿತಲ್ಲವೆ? ಅನೇಕ ಸಾಧನ ಸಾಮುಗ್ರಿಗಳಿಂದ ಪಡೆದುಕೊಂಡ ಅಂತಿಮ ಸಚ್ಚಿದಾನಂದ ಬ್ರಹ್ಮವೇ ನಾನು ಎಂಬುವ ಬುದ್ಧಿಶಕ್ತಿರೂಪವಾದ ವೃತ್ತಿಗೂ ಕೂಡಾ ನಾಶವನ್ನು ಸ್ವೀಕರಿ ಸಿದ ಪಕ್ಷದಲ್ಲಿ ತನಗೆ ಸಚ್ಚಿದಾನಂದಾದಿ ಸ್ವರೂಪಗಳಿದ್ದರೂ ಅವು ವ್ಯರ್ಥಗಳೇ ಎಂದು ಹೇಳ ಬೇಕಾಗುವದು. ಯಾಕೆಂದರೆ ತನ್ನ ಆನಂದಭೋಗಕ್ಕೆ ಸಾಧಕವಾದ ಅನಾದಿಬೋಧರೂಪ ವಾದ ಅಂತಃಕರಣವೇ ನಷ್ಟವಾದಮೇಲೆ ಆ ತನ್ನ ಆನಂದಾದಿ ಸ್ವರೂಪಗಳಿಂದ ಪ್ರಯೋಜನ ವೇನು? ಒಳ್ಳೇ ರಮಣೀಯವಾದ ಕೇಲೀಗೃಹದಲ್ಲಿ ರಮಣಿಯೋರ್ವಳಿಲ್ಲದಿದ್ದರೆ ಆ ಗೃಹದ ಸೌಂದರ್ಯಸ್ವರೂಪವು ವ್ಯರ್ಥವಲ್ಲವೆ? ವಿವೇಕ ಬುದ್ಧಿಯಿಲ್ಲದ ಉನ್ಮತ್ತನಿಗೆ ಸತ್ಪುರುಷರು ಮಾಡುವ ಸದುಪದೇಶವು ವ್ಯರ್ಥವಲ್ಲವೆ? ಬಧಿರನಿಗೆ ಸಂಗೀತ ಶ್ರವಣದಿಂದ ಪ್ರಯೋಜನವೇನು! ಅತಿ ರೂಪಲಾವಣ್ಯಗಳಿದ್ದರೂ ನೇತ್ರಗಳಿಲ್ಲದಿದ್ದರೆ ಅವುಗಳು ವ್ಯರ್ಥಗಳಾಗುವಂತೆ ಬ್ರಹ್ಮಕ್ಕೊಂ ದು ತನ್ನ ಆನಂದಾದಿ ಭೋಗಕ್ಕೆ ಸಾಧಕವಾದ ಬುದ್ಧಿಶಕ್ತಿಯಿಲ್ಲದಿದ್ದರೆ ಆ ಸ್ವರೂಪಗಳು ವ್ಯರ್ಥಗಳೆಂದೇ ಹೇಳಬೇಕು. ಇದಲ್ಲದೆ ಬ್ರಹ್ಮವು ಪಾಷಾಣದಂತೆ ಜಡವಾಗಬೇಕು. ಪಾಷಾ ಣಕ್ಕೆ ನನ್ನ ಸ್ವರೂಪವಿಂಥಾದ್ದು ಎಂದು ತಿಳಿಯುವ ಸಾಮರ್ಥ್ಯವಿಲ್ಲದಿರುವದರಿಂದದು ಜಡವೆನಿ ಸುವದು. ಅದರಂತೆ ಬ್ರಹ್ಮಕ್ಕೂ ಅಹಂಬ್ರಹ್ಮಭೂತನಾದ ಜೀವನ್ಮುಕ್ತನಿಗೂ ತನ್ನ ಆನಂದಾದಿ ಸ್ವರೂಪದ ಅನುಭವವೊಂದಿಲ್ಲದಿದ್ದರೆ ಬ್ರಹ್ಮಕ್ಕೆ ಜಡತ್ವವನ್ನು ಏಕೆ ಹೇಳಬಾರದು? ಇದಲ್ಲದೇ ಕೈವಲ್ಯೋಪನಿಷತ್ತಿನಲ್ಲಿ ಹೇಳಲ್ಪಟ್ಟ ಮುಕ್ತನಾದ ಪರಮೇಷ್ಠಿಯು "ಚಿನ್ಮಾತ್ರೋಹಂ ಸದಾ ಶಿವಃ" ಎಂಬುವ ವ್ಯವಹಾರಕ್ಕೂ ಕೂಡಾ ಸಂಗತಿಯಾಗಲಾರದು. ಆ ಮುಕ್ತನಾದ ಪರಮೇ

ಖಿಲಂಮಲಂ | ಬೋಧಾನುವೇಧಾದ್ದೀಕ್ಷೋಕ್ತಾದಾನಕ್ಷಪಣಧರ್ಮಿಣೀ ||
ಇತಿ. ಉಕ್ತಂಚಾಯಮೇವಾರ್ಥೋ ರೇಣುಕಾಗಸ್ತ್ಯಸಂವಾದೇಪಿ || ದೀಯ
ತೇಚ ಶಿವಜ್ಞಾನಂ ಕ್ಷೀಯತೆ ಪಾಶಬಂಧನಂ | ಯಸ್ಮಾದತಃ ಸಮಾಖ್ಯಾತಾದಿ
ಕ್ಷೇಸೇಯಂವಿಚಕ್ಷಣೈಃ|| ಇತಿ. ನಚ ಶಿವಾದ್ವೈತಹಾನಿಸ್ತಸ್ಯಾ ಆತ್ಮರೂಪತ್ವಾ
ತ್ | ಮಣಿದ್ಯುಮಣಿಪ್ರಕಾಶವತ್ | ನನು ಪ್ರಕಾಶಸ್ಯತದಂಶಾತ್ಮಕತ್ವಾತ್
ಪ್ರಭಾಕರ ಪ್ರಭಯೋರಭೇದಃ | ತದ್ವದೇವ ಬ್ರಹ್ಮಣಾಂಶರೂಪಾಶಕ್ತಿರಿತಿವದ
ಸಿಕಿಂ. ವದಾಮಿ ತೇನ ಕಿಸ್ನಶ್ಭಿನ್ನಮ್ ನಿರವಯತ್ವಶ್ರುತ್ಯಾಕೋಪ ಇತಿ
ನಭ್ರಮಿತವ್ಯಂ | ತಸ್ಯಾಃ ಪ್ರಾಕೃತಾಂಶ ನಿಷೇಧಪರತ್ವಾತ್. ತೈಜಸಾಂಶೇನ

---

ಷ್ಠಿಯು ತತ್ವಜ್ಞಾನದಿಂದ ಅಜ್ಞಾನವನ್ನು ನಾಶಮಾಡಿಕೊಂಡು ತನ್ನ ಆ ತತ್ವಜ್ಞಾನರೂಪವಾದ ವೃತ್ತಿಯನ್ನೂ ಕೂಡಾ ನಾಶಮಾಡಿಕೊಂಡಮೇಲೆ ಪುನಃ ಆ ವೃತ್ತಿಯು ಹುಟ್ಟದೆ ಇರುವದ ರಿಂದ ಆ ಪ್ರಕಾರವಾಗಿ ವ್ಯತ್ಯಭಿನಯಪೂರ್ವಕವಾಗಿ ಹೇಳುವದೇಕೆ? ಇದರಿಂದ ಆ ವೃತ್ತಿಯು ನಾಶಹೊಂದದೆ ಇರುತ್ತದೆಂದು ಸಿದ್ಧವಾಗುವದಿಲ್ಲವೆ? ಎಲೈ ಶಿವಾದ್ವೈತಿಯೆ! ಶರೀರಪಾತಾ ನಂತರದಲ್ಲಿ ಆ ವೃತ್ತಿಗೆ ನಾಶವನ್ನು ಹೇಳುತ್ತೇವೆ. ಆದ್ದರಿಂದ ಆ ಪರಮೇಷ್ಠಿಯ ವ್ಯವಹಾ ರಕ್ಕೆ ಅಸಂಗತಿಯಾಗಲಾರದು. ಅಂದರೆ ಪುನಃ ಅಂಥ ವೃತ್ತಿಯ ಲಾಭಕ್ಕಾಗಿ ಪೂರ್ವದಂತೆ ಕರ್ಮಾನುಷ್ಠಾನ ಮಾಡಬೇಕಾಗುವದು. ಮತ್ತು ಶ್ರವಣಾದಿಗಳನ್ನು ಆಚರಿಸಬೇಕಾದೀತು. ಆದುದರಿಂದ ವೃತ್ತಿಗಳು ಅನಿತ್ಯಗಳೆನ್ನುವದು ಶುದ್ಧ ತಪ್ಪು. ವೃತ್ತಿಗಳು ನಿತ್ಯಗಳಾಗಲು ಬ್ರ ಹ್ಮಾಕಾರವಾದ ವೃತ್ತಿಯೂ ಕೂಡ ನಿತ್ಯವು. ಇಂಥ ಬುದ್ಧಿ ಶಕ್ತಿಯಿಂದ ಕೂಡಿದ ಆತ್ಮನೂ ಕೂಡ ನಿತ್ಯನು. ಆದ್ದರಿಂದ ಅಪರಾಹಂತಾಮಯವಾದ ಮತ್ತು ತನ್ನ ಆನಂದಾದಿ ಕಲ್ಯಾ ಣಗುಣಗಳು ವಿಷಯಗಳಾಗಿವುಳ್ಳ ಬುದ್ಧಿ ಶಕ್ತಿ ವಿಕಾಸರೂಪವಾದ ಅಪರೋಕ್ಷಾನುಭವಸ್ವರೂ ಪವಾದ ಪರಮೇಶ್ವರನ ಸಂಬಂಧಿಯಾದ ಚಿಚ್ಛಕ್ತಿಯನ್ನು ಪ್ರವೇಶಿಸಿದಂಥ ಪ್ರತಿ ಬುದ್ಧನು ಶಿವ ಸ್ವರೂಪವಾದ ಅಮೃತತ್ವವನ್ನು ಹೊಂದಿಬಿಡುವನು. ಈ ವಿಷಯದಲ್ಲಿ ಅಹಂಕಾರ ಮಮಕಾ ರಗಳಿಂದ ಹುಟ್ಟಿದ ಸಂಸಾರವು ಪರಾಹಂತಾಮಯವಾದ ಚಿಚ್ಛಕ್ತಿಯನ್ನು ಪ್ರವೇಶಮಾಡಿದಕೂ ಡಲೇ ಅಹಂಕಾರ ಮಮಕಾರಗಳ ನಾಶವಾಗಿ, ಆಮೇಲೆ ಸಂಸಾರವು ನಾಶವಾಗಿಬಿಡುವದೆಂಬ ಭಗವತ್ಪಾದ ರೇಣುಕರ ವಾಕ್ಯವು ಪ್ರಮಾಣವಾಗಿದೆ. ಇದಲ್ಲದೆ ಭಟ್ಟ ಶ್ರೀಕಲ್ಲಟಾಚಾರ್ಯ ರೂ ಕೂಡಾ ಹಿಂದೆ ಹೇಳಿದ ಚಿಚ್ಛಕ್ತಿಗೇನೇ ಅಮೃತಪ್ರಾಪ್ತಿಯೆಂತಲೂ, ಇದುವೇ ಆತ್ಮಜ್ಞಾ ನವೆಂತಲೂ, ಇದುವೇ ನಿರ್ವಾಣದೀಕ್ಷೆಯೆಂತಲೂ; ಇದುವೇ ಶಿವತ್ವವನ್ನು ಕೊಡುವಂಥಾ ದ್ದೆಂತಲೂ ಹೇಳಿರುವರು. ಅಲ್ಲದೆ ಆ ಶ್ಲೋಕದ ಟೀಕಾಕಾರರಾದ ಉತ್ಪಲಾಚಾರ್ಯರೂ ಕೂಡಾ ಯಾವ ಚಿದಾನಂದಾದಿ ಬ್ರಹ್ಮವೇ ನಾನು ಎಂಬ ಜ್ಞಾನವಿದೆಯೋ, ಈ ಜ್ಞಾನ ವಾದಮೇಲೆ ಪುನಃ ಜರಾಮರಣಗಳಿಲ್ಲದಿರುವದರಿಂದ ಈ ಜ್ಞಾನವೇ ಅಮೃತಪ್ರಾಪ್ತಿಯು.

ಚಕ್ಷುರಿಂದ್ರಿಯೇಣ ತೈಜಸಸೂರ್ಯಾದಿಗ್ರಹಣಮಿವ ತಚ್ಛಕ್ತ್ಯೈವ ಪರಶಿವಬ್ರ
ಹ್ಮಣೋ ಗ್ರಹಣಮಿತಿವಕ್ತವ್ಯತ್ವಾತ್ | ತಾದೃಶಾತ್ಮಶಕ್ತಿ ಪ್ರಾಪ್ತಿರೇವಾದಾ
ಸಂಪಾದನೀಯಾ | ಅತಏವೋಪನಿಷದಿ ‖ ತೇಧ್ಯಾನಯೋಗಾನುಗತಾ ಅಪ
ಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ" ಇತಿ ಶ್ರೂಯತೆ. ಶ್ರೂಯತೇಚ
"ನಾಯಮಾತ್ಮಾ ಬಲಹೀನೇನಲಭ್ಯ" ಇತಿ, ವಿದ್ವದ್ಭಿಃ ಶಕ್ತಿಪಾತಪವಿತ್ರಿತಹೃದ
ಯೈರಿಯಮೇವ ಚಿಚ್ಛಕ್ತಿಃ ಪ್ರತಿಬೋಧಶಬ್ದವಾಚ್ಯೇತಿ ವಿಮರ್ಶನೀಯಂ. ಗು
ರುಲಿಂಗಜಂಗಮಪ್ರಸಾದವಿರಹಾತ್ ಅನಭಿಭೂತಗಾಢಾಜ್ಞಾನ ನಿದ್ರಾಬದ್ಧಬೌ
ದ್ಧಶಕ್ತೀನ್ ಗುಣಮಹದಹಂಕಾರ ಭೂತಭೌತಿಕವಿಷಯಜಾತಾನಿ ಘೋರಸಂ

---

ಇದುವೇ ಪರಮಾತ್ಮನಲ್ಲಿ ಜೀವವನ್ನು ನಿವೇಶಗೊಳಿಸುವಕಾರಣ, ನಿರ್ವಾಣದೀಕ್ಷೆಯು ಎಂಬ
ದಾಗಿಯೂ, ಸರ್ವಸಂಕಲ್ಪಗಳನ್ನು ಬಿಟ್ಟು ಶುದ್ಧ ಸದ್ರೂಪ ಬ್ರಹ್ಮದಲ್ಲಿ ಚಿತ್ತವನ್ನು ನಿವೇಶ
ಗೊಳಿಸಿ, ಅಲ್ಲಿಯೇ ಲೀನಮಾಡಿದರೆ ಮೃತ್ಯುವಿನ ಜಯವಾಗುತ್ತದೆಂಬುವ ಮೋಕ್ಷ ಧರ್ಮದ
ಶ್ಲೋಕವನ್ನು ಹೇಳಿರುವರು. ಇದಲ್ಲದೆ ಬೋಧರೂಪ ಶಿವತ್ವವನ್ನು ಸ್ಥಾಪಿಸಿ ಜೀವಭಾವವನ್ನು
ಕಳೆದುಬಿಟ್ಟಕಾರಣ, ಜ್ಞಾನದಾನ ಮತ್ತು ಮಲನಾಶಗಳೆಂಬ ಧರ್ಮವುಳ್ಳದ್ದೇ ದೀಕ್ಷೆ
ಯು. ಯಾಕಂದರೆ ಇದು ಶಿವತತ್ವಜ್ಞಾನವನ್ನು ಕೊಡುವದಾಗಿ ಎಲ್ಲಾ ಮಲಗಳನ್ನು ನಾಶ
ಮಾಡುವದಾಗಿಯೂ ಇರುವ ಕಾರಣ ಇದಕ್ಕೆ ದೀಕ್ಷೆಯೆಂದು ಹೆಸರು ಬಂದಿದೆ. ಇದೇ ಅರ್ಥ
ಕ್ಕೆ ಅನುಕೂಲವಾಗಿ ರೇಣುಕ ಭಗವತ್ಪಾದರೂ ಕೂಡಾ ಶಿವಜ್ಞಾನವನ್ನು ಕೊಡುವ ಪಾಶಗಳ
ಬಂಧವನ್ನು ನಾಶಮಾಡುವಂಥಾದ್ದೆ ದೀಕ್ಷೆಯೆಂದು ಹೇಳಿರುವರು. ಆದಕಾರಣ ಎಲೈ ಬ್ರಹ್ಮಾ
ದ್ವೈತಿಯೇ! ಜ್ಞಾನಕ್ರಿಯಾಸಮರಸರೂಪವಾದ ಯಾವ ವಿಮರ್ಶಶಕ್ತಿಯುಂಟೋ ಅದಕ್ಕೇನೆ
ಚಿಚ್ಛಕ್ತಿಯೆಂತಲೂ, ಶಿವಾದ್ವೈತಜ್ಞಾನವೆಂತಲೂ, ದೀಕ್ಷೆಯೆಂತಲೂ, ನಮ್ಮ ಶಿವಾದ್ವೈತ
ಶಾಸ್ತ್ರದಲ್ಲಿ ವ್ಯವಹಾರವಿರುವಕಾರಣ ಒಂದು ಕಡೆಯಲ್ಲಿ ದೀಕ್ಷೆಯಿಂದ ಮುಕ್ತಿಯೆಂದೂ,
ಮತ್ತೊಂದು ಕಡೆಯಲ್ಲಿ ಶಿವಾದ್ವೈತಜ್ಞಾನದಿಂದ ಮುಕ್ತಿಯೆಂದೂ ಹೇಳುವೆಯಲ್ಲಾ; ಎಂದು
ಭ್ರಮಿಸಬೇಡ. ಈ ಚಿಚ್ಛಕ್ತಿರೂಪವಾದ ಶಿವಾದ್ವೈತಜ್ಞಾನವೆಂಬ ವೃತ್ತಿಯು ನಿತ್ಯವಾಗಿದ್ದರೂ
ಅದು ಪರಮಾತ್ಮನ ಸ್ವರೂಪವೇ ಆಗಿದೆ. ಆದ್ದರಿಂದ ಶಿವಾದ್ವೈತಕ್ಕೆ ಹಾನಿ ಇಲ್ಲವು. ರತ್ನಕ್ಕೂ
ರತ್ನದ ಪ್ರಕಾಶಕ್ಕೂ, ಸೂರ್ಯನಿಗೂ ಸೂರ್ಯನ ಪ್ರಕಾಶಕ್ಕೂ ಅಭೇದವಿರುವಂತೆ, ಶಕ್ತಿಗೂ
ಶಕ್ತನಾದ ಶಿವನಿಗೂ ಅಭೇದವಿರುವಕಾರಣ, ಶಿವಾದ್ವೈತಕ್ಕೆ ಭಂಗವಿಲ್ಲವೆಂಬುವದೇ ನಮ್ಮ
ಸಿದ್ಧಾಂತವು. ಸೂರ್ಯನ ಪ್ರಕಾಶವು ಸೂರ್ಯನ ಅಂಶರೂಪವಾಗಿದೆ. ಆದ್ದರಿಂದ ಅಂಶರೂಪ
ವಾದ ಪ್ರಕಾಶಕ್ಕೂ ಅಂಶಿಯಾದ ಸೂರ್ಯನಿಗೂ ಅಭೇದವಿರುವಂತೆ ಶಕ್ತಿಗೂ ಶಿವನಿಗೂ
ಅಂಶಾಂಶಿಭಾವವನ್ನು ಹೇಳಿದ್ದಾದರೆ ನಿರವಯವ, ನಿಷ್ಕಲ, ನಿರ್ಗುಣ ಎಂದು ಶ್ರುತಿಯು ಏಕೆ
ಹೇಳುತ್ತದೆ? ಶಿವಾದ್ವೈತಿಯೇ! ಶಕ್ತಿಯೆಂಬ ಅಂಶವನ್ನು ಶಿವನಿಗೆ ಹೇಳಿದ್ದಾದರೆ ಶಿವನು ನಿರಂ
ಶನೆಂಬ ಶ್ರುತಿವಾಕ್ಯಕ್ಕೆ ವಿರುದ್ಧವಾಗುವದಿಲ್ಲವೇ? ಬ್ರಹ್ಮಾದ್ವೈತಿಯೇ ಕೇಳು—ಶ್ರುತಿಯು

ಸಾರೆಪಾತಯಂತಿ. ಅಪ್ರತಿಬೋಧಪ್ರಾಪ್ತೇಃ. ತಸ್ಮಾತ್ಕಥಂ ನರಃ ಪ್ರತಿಬೋಧಂ ತಚ್ಛಕ್ತಿಂ ಏಂದತ ಇತ್ಯತಆಹ ಆತ್ಮನಾಏಂದತೆ ಏರ್ಯಮಿತಿ ಆತ್ಮನಾಶುದ್ಧೇನ ಸ್ವವಶೀಕೃತ ಭೂತಭೌತಿಕೇನ ವೀರ್ಯಂ ಶಕ್ತಿಂ ಪೂರ್ವೋಕ್ತಾಂ ಪ್ರತಿಬೋಧಶಬ್ದವಾಚ್ಯಾಂಏಂದತೆ ನಹ್ಯಶುದ್ಧಾತ್ಮಾ ದೇಹಾದಿಕಮೇವಾತ್ಮತ್ವೇನ ಮನ್ಯಮಾನಸ್ತಾಂಏಂದತೆ ತಸ್ಮಾದಾತ್ಮನಃ ಶುದ್ಧಿರಪೇಕ್ಷ್ಯತೆ. ಸಾಚದ್ವಿವಿಧಾ ಜೀವಸ್ಯ ಶಿವಭಾವಾಪಾದನರೂಪಾ ಜೀವಶುಧ್ಯಾತ್ಮಿಕಾ ಪೂಜಕಜೀವಸ್ಯ ಶಿವದೇಹತ್ವಾಪಾದನಾತ್ಮಿಕಾ ದೇಹಶುದ್ಧಿರೂಪಾಚ. ಏತಚ್ಛುದ್ಧಿದ್ವಯಪ್ರಕಾರಸ್ಯಾಪಿ ಕ್ರಿಯಾಸಾರೆ ಚತುರ್ದಶೋಪದೇಶೇ ವಿಸ್ತರೇಣಾಭಿಹಿತತ್ವಾತ್ತತಏವಾವಗಂತವ್ಯಂ | ಶಿವಸೂತ್ರೇಷ್ವಪ್ಯುಕ್ತಂ "ಶರೀರೇಸಂಹಾರಃಕಲಾನಾಂ" ಇತಿ

---

ಪ್ರಾಕೃತಗಳಾದ ಅಂಶಗಳು ಶಿವನಲ್ಲಿಲ್ಲವೆಂದು ಹೇಳುತ್ತದೆಯಲ್ಲದೆ ಅಪ್ರಾಕೃತ ಶಕ್ತಿರೂಪವಾದ ಅಂಶವೂ ಕೂಡಾ ಇಲ್ಲವೆಂದು ಹೇಳುವದಿಲ್ಲ. ಆ ಪರಶಿವ ಬ್ರಹ್ಮಕ್ಕೆ ನಿತ್ಯವಾದ ಒಂದು ಅಂಶವನ್ನು ಹೇಳದಿದ್ದರೆ ಅದರ ಸಾಕ್ಷಾತ್ಕಾರವೇ ಆಗಲಿಕ್ಕಿಲ್ಲ. ಹೇಗೆಂದರೆ ವಾಯುವಿನ ಅಂಶರೂಪವಾದ ತ್ವಗಿಂದ್ರಿಯದಿಂದ ವಾಯುವಿನ ಪ್ರತ್ಯಕ್ಷವೂ ತೇಜಸ್ತತ್ವದ ಅಂಶರೂಪವಾದ ಚಕ್ಷುರಿಂದ್ರಿಯದಿಂದ ಸೂರ್ಯನ ಪ್ರತ್ಯಕ್ಷವೂ ಆಗುತ್ತದೆಯಲ್ಲದೆ ಬೇರೆ ಇಂದ್ರಿಯಗಳಿಂದಾಗದಿರುವಂತೆ ಚಿಚ್ಛಕ್ತಿಯು ಪರಶಿವಬ್ರಹ್ಮಕ್ಕೆ ಭಿನ್ನವಾದದ್ದು. ಆ ಬ್ರಹ್ಮದ ಅಂಶವಲ್ಲವು ಯೆಂದು ಸ್ವೀಕರಿಸಿದ್ದಾದರೆ ಆ ಬ್ರಹ್ಮದ ಸಾಕ್ಷಾತ್ಕಾರವಾಗದೆ ಹೋದೀತು. ಸಾಕ್ಷಾತ್ಕಾರವಾಗದಿದ್ದರೆ ಮುಕ್ತಿಯಂತೂ ದೂರೇ ಉಳಿಯಿತು. ಅಂದಮೇಲೆ ಶಾಸ್ತ್ರವಿಚಾರವು ವ್ಯರ್ಥವಾಗಬೇಕು ಆದ್ದರಿಂದ ಚಿಚ್ಛಕ್ತಿಯು ಪರಶಿವ ಬ್ರಹ್ಮದ ಅಂಶವೇಂದೇ ಶಿವಾದ್ವೈತಿಗಳು ಒಪ್ಪುತ್ತಾರೆ. ಅದಕ್ಕೋಸ್ಕರ ಆ ಚಿಚ್ಛಕ್ತಿಯೆಂಬ ತನ್ನ ಶಕ್ತಿಯ ಪ್ರಾಪ್ತಿಯನ್ನೇ ಮೊದಲು ಸಂಪಾದಿಸತಕ್ಕದ್ದು. ಆದ್ದರಿಂದಲೇ ಉಪನಿಷತ್ತಿನಲ್ಲಿ ಆ ಧ್ಯಾನಯೋಗಿಗಳು ಇಚ್ಛಾಜ್ಞಾನಕ್ರಿಯಾಶಕ್ತಿಗಳೆಂಬ ಗುಣಗಳಿಂದ ಮುಚ್ಚಲ್ಪಟ್ಟ ಚಿದ್ರೂಪವಾದ ತಮ್ಮ ಶಕ್ತಿಯನ್ನು ನೋಡಿದರೆಂದು ಕೇಳಲ್ಪಡುತ್ತದೆ. ಇದಲ್ಲದೆ ಆತ್ಮಶಕ್ತಿಯೆಂಬ ಬಲವಿಲ್ಲದವನು ಆ ಪರಮಾತ್ಮನನ್ನು ಹೊಂದಲಿಲ್ಲವೆಂದು ಮತ್ತೊಂದು ಉಪನಿಷತ್ತು ಹೇಳುತ್ತದೆ. ಆದಕಾರಣ ಶಿವದೀಕ್ಷೆಯಿಂದ ಪವಿತ್ರವಾದ ಹೃದಯ ಉಳ್ಳವರೂ ವಿದ್ವಾಂಸರೂ ಆದ ಶಿಷ್ಯರು ಪ್ರತಿಬೋಧಶಬ್ದಕ್ಕೆ ನಾವು ಹಿಂದೆ ಹೇಳಿದ ಚಿಚ್ಛಕ್ತಿಯೆಂಬ ಅರ್ಥವನ್ನೇ ತಿಳಿಯತಕ್ಕದ್ದು. ಅಲ್ಲದೇ ಬೇರೆಯವರು ತಮ್ಮ ಮನಸ್ಸಿಗೆ ಬಂದಹಾಗೆ ಬರೆದ ಅರ್ಥವನ್ನು ಗ್ರಹಿಸಕೂಡದೆಂದು ಶ್ರೀ ಶಾಂಕರೀಕಾರನ ಅಭಿಪ್ರಾಯವು.

ಗುರುಲಿಂಗಜಂಗಮರುಗಳ ಪ್ರಸಾದ ವಿರಹಿತರಾದ ಕಾರಣದಿಂದ ವಾರಣಮಾಡಲಶಕ್ಯವಾದ ಗಾಢವಾದ ಅಜ್ಞಾನವೆಂಬ ನಿದ್ರೆಗೆ ಪರತಂತ್ರವಾದ ಬುದ್ಧಿಶಕ್ತಿಯುಳ್ಳ ಜನಗಳನ್ನು ಗುಣವೆಂಬ ತತ್ವವೂ, ಅಹಂಕಾರವೂ, ಭೂತಭೌತಿಕಗಳಾದ ವಿಷಯ ಸಮೂಹಗಳು ಭಯಂಕರ

ಸ್ಥೂಲಸೂಕ್ಷ್ಮಕಾರಣಶರೀರತ್ರಯ ತದ್ಗತ ಪೃಥಿವ್ಯಾದಿ ಶಿವಾಂತ ತತ್ತ್ವಾನಿ ವೀರ ಶೈವಸಾಂಪ್ರದಾಯಾನುಸಾರೇಣ ಪರಶಿವಲಿಂಗೇ ಸಮರ್ಪ್ಯ ಶುಷ್ಕಸ್ಥಾಣುಮಿವ ಕಾಲಾಗ್ನಿನಾದಗ್ಧ್ವಾ ತೇಷಾಂ ದಾಹಾದಿ ಭಾವನಾಂಕೃತ್ವಾ ಶಿವಂಧ್ಯಾಯೇತ್. ಧ್ಯಾನದಾರ್ಢ್ಯೇನಚ ಶಿವಪ್ರಸಾದಾತ್ ಆವಿರ್ಭೂತಾಂ ಚಿಚ್ಛಕ್ತಿಂ ಸರ್ವಾತ್ಮಕ ಶಿವೋಽಹಮಿತಿ ಶುದ್ಧವಿದ್ಯಾರೂಪಾಂವಿಂದತೇ ಇತ್ಯರ್ಥಃ, ತತ್ಸೂತ್ರಿತಂ ಶಿವೇನ ,,ಮೋಹಜಯಾದನಂತಾ ಭೋಗಾತ್ಸಹಜ ವಿದ್ಯಾಜಯಃ,, ಇತಿ. ತದನಂತರಂ ವೀರ್ಯರೂಪಯಾ ವಿದ್ಯಯಾ ಸಹಜಾಪರೋಕ್ಷರೂಪಯಾ ,,ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ,, ಇತಿ ಶ್ರುತೇಃ ಅಮೃತಂ ಶಾಶ್ವತಂ ಪರ ಶಿವಲಿಂಗರೂಪಂ ಪರಪದಂ ವಿಂದತೇ "ಭಾವಗ್ರಾಹ್ಯಮನೀಡಾಖ್ಯಂ ಭಾವಾ

---

ವಾದ ಸಾರವಿಲ್ಲದಿರುವ ಸಂಸಾರ ಸಮುದ್ರದಲ್ಲಿ ಮುಳುಗಿಸಿ ಬಿಡುತ್ತವೆ. ಹಿಂದೆ ಹೇಳಿದ ಪ್ರತಿಬೋಧವೆಂಬ ಶಕ್ತಿಯನ್ನು ಪಡೆದುಕೊಂಡ ಜನಗಳು ಆ ವಿಷಯಗಳಿಗೆ ಅಧೀನರಾಗದೆ ಆ ಸಂಸಾರ ಸಮುದ್ರವನ್ನು ದಾಟಿಹೋಗುವರು. ಅಂದಮೇಲೆ ಆ ಪ್ರತಿಬೋಧವೆಂಬ ಶಕ್ತಿಯನ್ನು ಪಡೆದುಕೊಳ್ಳುವ ಬಗೆ ಹೇಗೆ ಎಂದು ಆಶಂಕೆಯು ಹುಟ್ಟಲಾಗಿ, ಭಗವತೀಶ್ರುತಿದೇವಿಯು ಆ ಶಕ್ತಿಯನ್ನು ಪಡೆದುಕೊಳ್ಳುವ ಉಪಾಯವಾವುದೆಂಬುದನ್ನು "ಆತ್ಮನಾವಿಂದತೇವೀರ್ಯಂ" ಎಂಬುವದರಿಂದ ತೋರಿಸುವಳು. ಆತ್ಮನ ಶುದ್ಧಿಯೇ ಆ ಶಕ್ತಿಯನ್ನು ಒದಗಿಸಿಕೊಡುವ ಉಪಾಯವು. ಯಾವನು ಪ್ರಕೃತಿತತ್ತ್ವವನ್ನೂ, ಮಾಯಾತತ್ತ್ವವನ್ನೂ, ಮಹತ್ತತ್ತ್ವ ಅಹಂಕಾರ ತತ್ತ್ವಗಳನ್ನೂ, ಇಂದ್ರಿಯಗಳನ್ನೂ, ಸೂಕ್ಷ್ಮಸ್ಥೂಲಭೂತಗಳನ್ನೂ ಶುದ್ಧಿಗೊಳಿಸಿರುವನೋ (ತನ್ನ ವಶಗಳನ್ನಾಗಿ ಮಾಡಿಕೊಂಡಿರುವನೋ) ಅವನೇ ಶುದ್ಧಾತ್ಮನು. ಅವನಿಗೇನೇ ಪೂರ್ವೋಕ್ತವಾದ ಪ್ರತಿಬೋಧಶಬ್ದವಾಚ್ಯವಾದ ಶಕ್ತಿಯ ಲಾಭವಾಗುವದಲ್ಲದೆ, ದೇಹಾದಿಗಳನ್ನೇ ನಾನೆಂದು ಅಭಿಮಾನಿಸಿಕೊಳ್ಳುವ ಅಶುದ್ಧಾತ್ಮನಿಗೆ ಆ ಚಿಚ್ಛಕ್ತಿಯ ಲಾಭವಾಗಲಾರದು ಆದುದರಿಂದ ಮೊದಲು ಆತ್ಮಶುದ್ಧಿಯನ್ನು ಸಂಪಾದಿಸಿಕೊಳ್ಳಬೇಕು. ಆ ಶುದ್ಧಿಯು ಶಾಸ್ತ್ರದಲ್ಲಿ ಎರಡು ಪ್ರಕಾರವೆಂದು ಹೇಳಿದೆ ಮೊದಲನೇದು ಜೀವನಿಗೆ ಶಿವತ್ವವನ್ನುಂಟುಮಾಡುವ ಜೀವಶುದ್ಧಿಯು, ಎರಡನೇದು ಪೂಜಕನಾದ ಜೀವನಿಗೆ ಶಿವದೇಹವನ್ನುಂಟುಮಾಡುವ ದೇಹಶುದ್ಧಿರೂಪವಾದದ್ದು. ಎಲ್ಲಿಯವರೆಗೆ ಜೀವನಿಗೂ ಜೀವನ ಶರೀರಕ್ಕೂ ಶಿವತ್ವವೂ ಶಿವನ ಶರೀರತ್ವವೂ ಇಲ್ಲವೋ ಅಲ್ಲಿಯವರೆಗೆ ಜೀವನು ಶಿವಪೂಜೆಗಧಿಕಾರಿಯಾಗುವದಿಲ್ಲವು ಆದಕಾರಣದಿಂದಲೇ "ಶಿವೋಭೂತ್ವಾ ಶಿವಂಯಜೇತ್" ಎಂದು ಶ್ರುತಿಯು ಸಾರುತ್ತದೆ. ಇದಲ್ಲದೆ "ನಾಶಿವಸ್ಯಶಿವೋಪಾಸ್ತಿರ್ಘಟತೆ ಜನ್ಮಕೋಟಿಭಿಃ | ಶಿವಸ್ಯೇವ ಶಿವೋಪಾಸ್ತಿರಿತಿ ನಾನಾಶ್ರುತಿಸ್ಥಿತಿಃ ||" ಎಂದು ಅನುಭವಸೂತ್ರವೂ ಕೂಡ ಹೇಳುತ್ತದೆ ಆದ್ದರಿಂದ ಪುರುಷನು ಮೊದಲು ತನ್ನನ್ನೂ ತನ್ನ ಶರೀರವನ್ನೂ ಶುದ್ಧಿಮಾಡಿಕೊಳ್ಳತಕ್ಕದ್ದು ವಿಹಿತವಾಗಿದೆ. ಈ ಜೀವಶುದ್ಧಿ ಶರೀರಶುದ್ಧಿ

ಭಾವಕರಂ ಶಿವಂ ಕಲಾಸರ್ಗಕರಂ ದೇವಂ ಯೇ ವಿದುಸ್ತೇಜಹುಸ್ತನುಂ” ಇತಿ ಶ್ವೇತಾಶ್ವತರಶ್ರುತೇಃ ಶುದ್ಧವಿದ್ಯೋದಯಾಚ್ಚ ಕ್ರೇಶತ್ವ ಸಿದ್ಧಿರಿತ್ಯಪಿ ಶಿವೇನಸೂತ್ರಿತಂ ಉಕ್ತಂಚಸ್ವಚ್ಛಂದೇ “ವೇದನಾದಿಧರ್ಮಸ್ಯ ಪರಮಾತ್ಮತ್ವಬೋಧನಾ | ವರ್ಜನಾಪರಮಾತ್ಮತ್ವೇ ತಸ್ಮಾದ್ವಿದ್ಯೇತಿಸೂಚ್ಯತೇ || ತತ್ರಸ್ಥೋವ್ಯಂಜಯೇತ್ತೇಜಃ ಪರಂಪರಮಕಾರಣಂ | ತಸ್ಮಿಂಶ್ಚ ತೇಜಸಿವ್ಯಕ್ತೆ ತತ್ರಸ್ಥಃ ಶಿವತಾಂವ್ರಜೇತ್ || ಇತಿ. ಇದಮತ್ರ ಶಿವಯೋಗರಹಸ್ಯಂ ಕಿಂಚಿತ್ಪ್ರದರ್ಶ್ಯತೇ “ಊರ್ಧ್ವಾಯನಮಃ ಊರ್ಧ್ವಲಿಂಗಾಯನಮಃ” ಇತ್ಯಾದಿ ಶ್ರುತ್ಯುಕ್ತಾನಿ ಲಿಂಗಾನಿ ಶಿವಯೋಗ ಶಾಸ್ತ್ರೋಕ್ತಪ್ರಕಾರೇಣ “ಉಚ್ಚಾರಕರಣಧ್ಯಾನ ವರ್ಣಸ್ಥಾನಪ್ರಕಲ್ಪನೈಃ | ಶುದ್ಧೇನಮನಸೈವ ಸಮ್ಯಗವಗಾಹ್ಯ, ತತ್ರ ಊರ್ಧ್ವಶಬ್ದವಾಚ್ಯಾಂ

---

ಗಳೆರಡರ ರೀತಿಯು ಕ್ರಿಯಾಸಾರದ ಹದಿನಾಲ್ಕನೇ ಉಪದೇಶದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟ ಕಾರಣ ಇಲ್ಲಿ ಆ ವಿಷಯವನ್ನು ನಾವು ಹೆಚ್ಚಿಗೆ ಪ್ರಸ್ತಾಪಿಸುವದಿಲ್ಲ. ಈ ಶುದ್ಧಿಯ ವಿಷಯವನ್ನು ಅದೇ ಗ್ರಂಥದಿಂದಲೇ ತಿಳಿಯತಕ್ಕದ್ದು. ಅರ್ಥಾತ್ ಕ್ರಿಯಾ ಮೊದಲಾದ ದೀಕ್ಷೆಗಳಿಲ್ಲದಿದ್ದರೆ ದೇಹಶುದ್ಧಿ ಜೀವಶುದ್ಧಿಗಳಾಗಲಾರವೆಂದು ಶಾಂಕರೀಕಾರನ ಅಂತರ್ಗತಾಶಯವು. ಈ ಶುದ್ಧಿ ವಿಷಯವು ಶಿವಸೂತ್ರಗಳಲ್ಲಿಯೂ ಹೇಳಲ್ಪಟ್ಟದೆ. ಏನಂದರೆ ಸ್ಥೂಲಸೂಕ್ಷ್ಮಕಾರಣ ಶರೀರಗಳನ್ನೂ ಆ ಶರೀರಗಳಲ್ಲಿರುವ ಭೂಮಿ ಮೊದಲುಗೊಂಡು ಶಿವಾಂತ ತತ್ವಗಳನ್ನೂ ವೀರಶೈವ ಸಂಪ್ರದಾಯಾನುಸಾರವಾಗಿ ಪರಶಿವಲಿಂಗದಲ್ಲಿ ಸಮರ್ಪಣಮಾಡಿ (ಲೀನಗೊಳಿಸಿ) ಅಥವಾ ಒಣಗಿದ ಒಂದು ಮರವನ್ನು ಬುಡದಲ್ಲಿ ಬೆಂಕಿ ಹಚ್ಚಿ ಬೂದಿಯನ್ನಾಗಿ ಮಾಡುವಂತೆ, ತನ್ನ ಪಾದಾಂಗುಷ್ಠದಲ್ಲಿ ಹುಟ್ಟಿದ ಕಾಲಾಗ್ನಿಯಿಂದ ದಹನ ಭಾವನೆಯನ್ನು ಮಾಡಿದಮೇಲೆ ಎಲ್ಲಾ ಪ್ರಾಕೃತ ಪದಾರ್ಥಗಳು ಸುಟ್ಟು ಬೂದಿಯಾಗುವವು (ಶುದ್ಧಗಳಾಗುವವು) ಆಮೇಲೆ ಶಿವನನ್ನು ಪೂಜಿಸುವದನ್ನೂ ಧ್ಯಾನಿಸುವದನ್ನೂ ಮಾಡಬೇಕು. ಆತ್ಮಶುದ್ಧಿ ದೇಹಶುದ್ಧಿಗಳಿಲ್ಲದೇ ಶಿವನನ್ನು ಪೂಜಿಸಿದರೆ ಪ್ರತ್ಯವಾಯವು ಹೇಳಲ್ಪಟ್ಟಿರುವದು. ಆದಕಾರಣ ಮೊದಲು ಶಿವದೀಕ್ಷೆಗಳಿಂದ ಆತ್ಮಶುದ್ಧಿ ಶರೀರಶುದ್ಧಿಗಳನ್ನು ಮಾಡಿಕೊಂಡು ಶಿವಲಿಂಗಪೂಜಾಧ್ಯಾನಗಳನ್ನು ಮಾಡುತ್ತ, ಧ್ಯಾನವು ದೃಢವಾಗಲು ಶಿವಾನುಗ್ರಹವಾಗಿ ಆ ಶಿವಾನುಗ್ರಹ ಮಹಿಮೆಯಿಂದ ಆವಿರ್ಭವಿಸಿದ ಚಿಚ್ಛಕ್ತಿಯನ್ನು ಹೊಂದಿಕೊಳ್ಳುವನು. ಈ ವಿಷಯದಲ್ಲಿ ಅಪರಿಮಿತ ಕಾರ್ಯಗಳ ವಿಸ್ತಾರವುಳ್ಳ ಮೋಹದ ಜಯವಾಗಲು, ತನ್ನ ಸಹಜವಾದ ವಿದ್ಯಾಜಯೆವು (ಪ್ರಾಪ್ತಿಯು) ಆಗುವದೆಂಬ ಶಿವಸೂತ್ರವು ಪ್ರಮಾಣವಾಗಿದೆ ಈ ಚಿಚ್ಛಕ್ತಿ ರೂಪವಾದ ವಿದ್ಯಾಪ್ರಾಪ್ತಿಯಾಗಲು, ಸರ್ವಾತ್ಮಕ ಶಿವನೇ ನಾನೆಂಬ ಅಪರೋಕ್ಷರೂಪವಾದ ಶುದ್ಧ ವಿದ್ಯೆಯೆಂಬ ವೀರ್ಯದಿಂದ ಅಮೃತವನ್ನು (ಸರ್ವೋತ್ಕೃಷ್ಟವಾದ ಪರಶಿವ ಪದವೆಂಬ ಮುಕ್ತಿಯನ್ನು) ಹೊಂದುತ್ತಾನೆ. ಈ ವಿಷಯದಲ್ಲಿ ಭಾವದಿಂದ ಗ್ರಹಿಸಲು ಯೋಗ್ಯವಾದ ತನಗೆ ಬೇರೊಂದು ಆಶ್ರಯವಿ

ಪಶ್ಚಿಮಚಕ್ರಾಂತರ್ಗತಾಂ ಚಿಚ್ಛಕ್ತಿಂ ಶುದ್ಧವಿದ್ಯಾಂ ಚಿತ್ತೇನಸಹ ಸಮಾರುಹ್ಯ ಶಕ್ತಿವಿಶಿಷ್ಟಂ ಊರ್ಧ್ವಲಿಂಗಶಬ್ದಿತಂ ಪರಶಿವಮಂತರರ್ಚಯೇತ್ | ಅಂತರಾರ್ಚನಾಂಗತ್ವೇನ ತದಾವಾಹನಸ್ಥಾಪನಾಭಿಮುಖೀಕರಣ ಸನ್ನಿರೋಧನಾವಕುಂಠನ ಸಕಲೀಕರಣ ಪರಮೀಕರಣಾಮೃತೀಕರಣಾನಿ ಕಾರ್ಯಾಣಿ ವೀರಶೈವಶಾಸ್ತ್ರೋಕ್ತಕ್ರಮೇಣ | ಅನ್ಯಥಾ ಸರ್ವವ್ಯಾಪಕಸ್ಯ ತಸ್ಯ ಮಹಾದೇವಸ್ಯ ಆವಾಹನಾದ್ಯಸಂಭವಃ ಸ್ಯಾತ್ | ಏವಮಭ್ಯಸ್ತಯೋಗೇನ ಸಾಕ್ಷಾತ್ಕಾರರೂಪಾಂ ಚಿಚ್ಛಕ್ತಿಂ ಪ್ರಾಪ್ಯಸ್ವಚಿತ್ತದಶಾಂವಿಗಮಯ್ಯ ದೇಹಕಲಾಸ್ಥಿತಿಪರ್ಯಂತಂ ತತ್ಸದೃಶೋಭೂತ್ವಾ ತದ್ವಿಲಯೇ ಅಹಿಕುಂಡಲನ್ಯಾಯೇನ ಅಮೃತಂಪದಂವಿಂದತೆ | ಪರಶಿವಾನಂದಸಮುದ್ರ ಸಮರಸಏವಭವತಿ | "ಯಥಾನದ್ಯಃ ಸ್ಯಂದಮಾನಃ

---

ಲ್ಲದಿರುವ ಭಾವಾಭಾವ ಪ್ರಪಂಚವನ್ನುಂಟುಮಾಡುವ ಕಲೆಗಳ ಸೃಷ್ಟಿಯನ್ನು ಮಾಡುವ ಮಹಾದೇವನಾದ ಶಿವನನ್ನು ಯಾರು ತಿಳಿವರೋ ಅವರು ಪುನಃ ಶರೀರವನ್ನು ಹೊಂದದೆ ಮುಕ್ತರಾಗುವರೆಂಬ ಶ್ವೇತಾಶ್ವತರ ಶ್ರುತಿಯು ಪ್ರಮಾಣವಾಗಿದೆ. ಇದಲ್ಲದೆ ಶುದ್ಧವಿದ್ಯೆಯ ಆವಿರ್ಭಾವವಾಗಲು ಚಕ್ರೇಶತ್ವಸಿದ್ಧಿಯು (ಶಿವತ್ವಪ್ರಾಪ್ತಿಯು) ಆಗುವದೆಂಬ ಶಿವಸೂತ್ರವೂ ಆ ಶುದ್ಧವಿದ್ಯೆಯೆಂಬ ಚಿಚ್ಛಕ್ತಿಯಲ್ಲಿದ್ದುಕೊಂಡು ಆ ಪರಮಕಾರಣವಾದ ಶಿವತೇಜಸ್ಸನ್ನು ಪ್ರಕಾಶಗೊಳಿಸಬೇಕು. ಆ ತೇಜಸ್ಸು ತನಗೆ ಅಭಿವ್ಯಕ್ತವಾಗಲು, ಆ ಅಭಿವ್ಯಕ್ತವಾದ ತೇಜಸ್ಸಿನಲ್ಲಿದ್ದು ನಿಚ್ಚಿರಗಾಗಿ ಶಿವತ್ವವನ್ನು ಹೊಂದುವನೆಂಬ ಸ್ವಚ್ಛಂದಗ್ರಂಥವೂ ಪ್ರಮಾಣವಾಗಿದೆ. ಇಲ್ಲಿ ಈ ಶಿವಯೋಗರಹಸ್ಯವನ್ನು ಸ್ವಲ್ಪ ತೋರಿಸುತ್ತೇವೆ. "ಊರ್ಧ್ವಾಯನಮಃ" ಎಂದು ಮೊದಲ್ಗೊಂಡು "ಏತತ್ಸೋಮಸ್ಯ" ಎಂಬುವವರೆವಿಗೂ ಇರುವ ಶ್ರುತಿಮಂತ್ರದಲ್ಲಿ ಹೇಳಲ್ಪಟ್ಟ ಲಿಂಗಗಳನ್ನು ಶಿವಯೋಗಶಾಸ್ತ್ರಪ್ರಕಾರವಾಗಿ ಉಚ್ಚಾರಕರಣ ಧ್ಯಾನವರ್ಣಸ್ಥಾನಗಳ ಕಲ್ಪನೆಯಿಂದ ಅಂದರೆ ಸ್ಥೂಲಸೂಕ್ಷ್ಮಪ್ರಾಣಾಯಾಮನೆಂಬ ಉಚ್ಚಾರದಿಂದಲೂ, ಖೇಚರ್ಯಾದಿ ಮುದ್ರಾಕರಣದಿಂದಲೂ, ಧ್ಯಾನದಿಂದಲೂ, ಆಯಾಯ ಲಿಂಗವಾಚಕ ವರ್ಣಗಳಿಂದಲೂ ಆಧಾರಾದಿ ಸ್ಥಾನಗಳಿಂದಲೂ, ಶುದ್ಧವಾದ ಮನಸ್ಸಿನಿಂದಲೇ ಅವಗಾಹನೆ ಮಾಡಿ ಅನಂತರದಲ್ಲಿ "ಊರ್ಧ್ವಾಯನಮಃ" ಎಂಬ ಶ್ರುತಿವಾಕ್ಯದಲ್ಲಿರುವ ಊರ್ಧ್ವಶಬ್ದವಾಚ್ಯವಾದ ಯಾವ ಪಶ್ಚಿಮ ಚಕ್ರದಲ್ಲಿರುವ ಚಿಚ್ಛಕ್ತಿಯುಂಟೋ ಅಂಥ ಶುದ್ಧ ವಿದ್ಯಾಶಕ್ತಿಯನ್ನು ಚಿತ್ತದೊಡನೆ ಚನ್ನಾಗಿ ಆರೋಹಣಮಾಡಿ ಆ ಶಕ್ತಿವಿಶಿಷ್ಟವಾದ "ಊರ್ಧ್ವಲಿಂಗಾಯನಮಃ" ಎಂಬ ಶ್ರುತಿವಾಕ್ಯದಲ್ಲಿರುವ ಊರ್ಧ್ವಲಿಂಗಶಬ್ದವಾಚ್ಯವಾದ ಭಾವಲಿಂಗವೆಂಬ ಪರಶಿವನನ್ನು ಅಂತರರ್ಚಿಸತಕ್ಕದ್ದು.

ಈ ಅಂತಃಪೂಜೆಗೆ ಅಂಗಭೂತವಾಗಿ ವೀರಶೈವ ಶಾಸ್ತ್ರದಲ್ಲಿ ಹೇಳಲ್ಪಟ್ಟಪ್ರಕಾರ ಆವಾಹನಾದಿ ಎಂಟು ಕಾರ್ಯಗಳನ್ನು ಮಾಡತಕ್ಕದ್ದು. ಈ ಪ್ರಕಾರವಾಗಿ ಯಾವನು ಅಂತರಂಗದಲ್ಲಿ ಶಿವಯೋಗಾಭ್ಯಾಸವನ್ನುಮಾಡಿ ಆ ಸಾಕ್ಷಾತ್ಕಾರರೂಪವಾದ ಚಿಚ್ಛಕ್ತಿಯನ್ನು ಹೊಂದಿ

ಸಮುದ್ರೇ ಅಸ್ತಂಗಚ್ಛಂತಿ ನಾಮರೂಪೆ ವಿಹಾಯ ತಥಾ ವಿದ್ವಾನ್ನಾಮರೂಪಾ ದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ'' ಇತಿ ಶ್ರುತೇಃ. ಕೀಟೋಭ್ರಮರಯೋಗೇನ ಭ್ರಮರೋಭವತಿಧ್ರುವಂ | ಮಾನವಃ ಶಿವಯೋಗೇನ ಶಿವೋಭವತಿಸರ್ವದಾ || ಇತಿಸ್ಮೃತೇಶ್ಚ. ಪಾಶಾಶ್ರಯತ್ವಾತ್ ಪಶುಕರ್ಮಣಾಂ ತಾನಿ ಸಂತ್ಯಜ್ಯ ಪತಿಕರ್ಮಾನುಷ್ಠಾನತಃ ಬುದ್ಧಿಪ್ರಸಾದಾನಂತರಂ ಸತ್ವಶುದ್ಧಿಂಪ್ರಾಪ್ಯ ಶಿವೋಹಮಿತಿ ಬುದ್ಧಿಶಕ್ತಿವಿಕಾಸಾನಂತರಂ ಪರಶಿವಏವಭವತಿ | "ಜ್ಞಾನಪ್ರಸಾದೇನವಿಶುದ್ಧಸತ್ವಃ ತತಸ್ತುತಂಪಶ್ಯತೇ ನಿಷ್ಕಲಂಧ್ಯಾಯಮಾನಃ'' ಆತ್ಮಾನಮರಣಿಂಕೃತ್ವಾ ಪ್ರಣವಂಚೋತ್ತರಾರಣಿಂ ಧ್ಯಾನನಿರ್ಮಥನಾಭ್ಯಾಸಾದ್ದೇವಂ ಪಶ್ಯೇನ್ನಿಗೂಢವತ್| ಇತಿಶ್ರುತೇಃ. ನನುಧ್ಯಾನಾದೀನಾಂ ಚಿತ್ತಶುದ್ಧಿಮಾ

---

ತನ್ನ ಚಿತ್ತದಶೆಯನ್ನು ಕಳೆದುಕೊಂಡಿರುವನೋ ಅವನು ದೇಹದ ಕಳೆಯು ಇರುವವರೆವಿಗೂ ಶಿವನಿಗೆ ಸಮಾನನಾಗಿದ್ದು ಆ ದೇಹ ಕಳೆಯೂ ಕೂಡ ವಿಲಯವಾದಮೇಲೆ ಸರ್ಪವು ತನ್ನ ಕುಂಡಲಾಕಾರವನ್ನು ಬಿಟ್ಟು ದೀರ್ಘಾಕಾರವನ್ನು ಹೊಂದುವಂತೆ ಪರಶಿವನ ಆನಂದ ಸಮುದ್ರದಲ್ಲಿ ಸಮರಸನಾಗಿ ಮುಕ್ತನಾಗುವನು. ಈ ವಿಷಯದಲ್ಲಿ ನದಿಗಳು ರುಜು ಕುಟಿಲಗಳಾಗಿ ಹರಿದು ಹೋಗಿ ಸಮುದ್ರವನ್ನು ಕೂಡಿ ಸಮುದ್ರದಲಿ ಸಮರಸಗಳಾಗುವಂತೆ ಈ ಚಿಚ್ಛಕ್ತಿಯೆಂಬ ವಿದ್ಯೆಯುಳ್ಳ ಶಿವಯೋಗಿಯು ತನ್ನ ನಾಮರೂಪಗಳಂ ಬಿಟ್ಟು ಆ ಸರ್ವೋತ್ಕೃಷ್ಟವಾದ ಪರಶಿವ ಪದವನ್ನೈದುವನು. ಎಂಬರ್ಥವುಳ್ಳ ಶ್ರುತಿಯು ಪ್ರಮಾಣವಾಗಿದೆ ಅಂದರೆ ನದಿಗಳು ಕೃಷ್ಣಾ ಗೋದಾವರಿ ಕಾವೇರಿ ಗಂಗಾ ಎಂಬ ತಮ್ಮ ನಾಮಗಳನ್ನು ಬಿಟ್ಟು ಸಮುದ್ರದಲ್ಲಿ ಸಮರಸಗಳಾಗುವವು. ಕೂಡಿಹೋದಮೇಲೆ ಇದು ಕೃಷ್ಣಾನದಿಯು ಇದು ಗೋದಾವರಿ ನದಿಯು ಎಂದು ಬೇರೆ ಬೇರೆ ಮಾಡಿ ತೋರಿಸಲಿಕ್ಕೆ ಬರುವದಿಲ್ಲ. ಅದರಂತೆ ಶಿವಯೋಗಾಭ್ಯಾಸದಿಂದ ಪಡೆದುಕೊಂಡ ಶಿವತತ್ವಜ್ಞಾನವುಳ್ಳ ಶಿವಯೋಗಿಗಳು ಆ ಪರಶಿವನ ಆನಂದ ಸಮುದ್ರದಲ್ಲಿ ಮುಳುಗಿಹೋದಮೇಲೆ ಆ ಶಿವಯೋಗಿಗಳ ಮೊದಲಿನ ನಾಮಗಳು ರೂಪಗಳು ಉಳಿಯುವದಿಲ್ಲವಾದಕಾರಣ ಆ ನಾಮಗಳಿಂದಲೂ, ರೂಪಗಳಿಂದಲೂ ಭೇದವು ತೋರಿಕೆಯಾಗದೆ ಶಿವಸ್ವರೂಪವೇ ಆಗುವದು. ಇದು ಅಲ್ಲದೆ ಕೀಡಿಯು ಭ್ರಮರದ ಯೋಗದಿಂದ ಭ್ರಮರವೇ (ಕುರುಡಿ ಕುಕ್ಕಾರಿಯೆ) ಆಗಿಬಿಡುವಂತೆ ಮನುಷ್ಯನು ಶಿವಯೋಗದಿಂದ ಶಿವನೇ ಆಗುವನೆಂಬ ಗೌತಮ ಸ್ಮೃತಿಯೂ ಕೂಡ ಪ್ರಮಾಣವಾಗಿದೆ.

ಪಶುಕರ್ಮಗಳೆಲ್ಲವೂ ಅಸ್ಥಿರ ಫಲಗಳುಳ್ಳವುಗಳಾದ ಕಾರಣ ಪಾಶಗಳನ್ನು ಆಶ್ರಯ ಮಾಡಿಕೊಂಡಿರುವವು. ಆದಕಾರಣ ವೀರಶೈವನು ಆ ಪಶುಕರ್ಮಗಳನ್ನನುಷ್ಠಿಸದೆ ಪತಿಕರ್ಮಗಳಾದ ಶಿವಪೂಜಾ ಮೊದಲಾದ ಕರ್ಮಾಚರಣೆಯಿಂದ ಬುದ್ಧಿನೈರ್ಮಲ್ಯವನ್ನು ಹೊಂದಿ ಸತ್ವಶುದ್ಧಿಯನ್ನು ಪಡೆದುಕೊಂಡು ನಾನು ಶಿವನೆಂಬದಾಗಿ ಬುದ್ಧಿಶಕ್ತಿ ವಿಕಾಸವಾಗಿ ಪರಶಿವನೇ

ತ್ರಪ್ರಯೋಜಕತ್ವಾತ್ ಬ್ರಹ್ಮಾಪರೋಕ್ಷಾಮೃತ ಪದಾನುಪಯುಕ್ತತ್ವಾ
ತ್ ಅಪರೋಕ್ಷಸ್ಯಾಜ್ಞಾನಗ್ರಂಥೇರಪರೋಕ್ಷಜ್ಞಾನನಿವರ್ತ್ಯತ್ವೌಚಿತ್ಯಾತ್ |
ಭಿದ್ಯತೆ ಹೃದಯಗ್ರಂಥಿಶ್ಛಿದ್ಯಂತೆ ಸರ್ವಸಂಶಯಾಃ| ಕ್ಷೀಯಂತೆ ಚಾಸ್ಯಕರ್ಮಾ
ಣಿತಸ್ಮಿನ್ ದೃಷ್ಟೇಪರಾವರೆ" | ಇತಿಶ್ರುತೇಃ. ಕಿಂಚಸರ್ವವ್ಯಾಪಕಸ್ಯ ನಿರಾಲಂ
ಬಸ್ಯ ಬ್ರಹ್ಮಣಃ ಮೂರ್ತತ್ವಾಭಾವಾತ್ ಹೃದಯಾದೌ ಕಿಂಚಿದುಪಾಸ್ಯಮಾ
ಲಂಬನೀಕೃತ್ಯ ತದುಪಾಸನಸಾಧ್ಯತ್ವೆ ಅಮೃತತ್ವಸ್ಯ ಅನಿತ್ಯತ್ವಾಪತ್ತೇಃ ಅತಏವ
ಶಂಕರಾಚಾರ್ಯೇಣ ಭಗವತಾಪಿ ಆತ್ಮವಿಜ್ಞಾನೇನ ಕಿಮಮೃತತ್ವ ಮುತ್ಪಾದ್ಯತೆ
ನ ಆತ್ಮನಾವಿಂದತೆಸ್ವೇನೈವ ನಿತ್ಯಾತ್ಮಸ್ವಭಾವೇನಾಮೃತತ್ವಂ ವಿಂದತೆ ನಾಲಂ
ಬನಪೂರ್ವಕಂ ವಿಂದತೆ ಇತ್ಯುಕ್ತಂ ನಿತ್ಯಶುದ್ಧಬದ್ಧಮುಕ್ತ ಸ್ವಭಾವಸ್ಯಾತ್ಮನ

---

ಆಗುತ್ತಾನೆ ಈ ವಿಷಯದಲ್ಲಿ ಬುದ್ಧಿಶುದ್ಧಿಯಿಂದ ಶುದ್ಧವಾದ ಸತ್ವವುಳ್ಳವನಾಗಿ ಆ ನಿಷ್ಕಲ
ವಾದ ಭಾವಲಿಂಗವನ್ನು ಧ್ಯಾನಮಾಡುವಂಥವನಾಗಿ ಆ ಪರಶಿವನನ್ನು ನೋಡುತ್ತಾನೆ. ಎಂಬ
ರ್ಥವುಳ್ಳ ಶ್ರುತಿಯೂ, ಪ್ರಣವನನ್ನು ಆತ್ಮನನ್ನು ಮೇಲೆ ಕೆಳಗಿರುವ ಕಟ್ಟಿಗೆಗಳೆಂದು ತಿಳಿದು
ಧ್ಯಾನವೆಂಬ ಮಥನಾಭ್ಯಾಸದಿಂದ ಮಹಾದೇವನನ್ನು ನೋಡುವನು. ಎಂಬರ್ಥವುಳ್ಳ ಶ್ರುತಿ
ಯೂ ಪ್ರಮಾಣವಾಗಿರುವವು. ಈ ಯಲ್ಲ ಶ್ರುತಿಗಳನ್ನು ವಿಚಾರಿಸುತ್ತಿರಲಿಕ್ಕೆ ಸಾಕ್ಷಾತ್ಕಾರರೂ
ಪವಾದ ತನ್ನ ಶಕ್ತಿ ವಿಕಾಸವೆಂಬ ಮುಕ್ತಿಗೆ ಧ್ಯಾನಾದಿಗಳೇ ಸಾಧನಗಳೆಂದು ತಿಳಿದುಬರುತ್ತದೆ.
ಇಲ್ಲಿ ಕೆಲವರು ಪೂರ್ವಪಕ್ಷಮಾಡುವದೇನಂದರೆ—ಧ್ಯಾನಾದಿಗಳು ಚಿತ್ತಶುದ್ಧಿಗೆ ಮಾತ್ರ ಪ್ರ
ಯೋಜಕಗಳಾಗಿರುವದರಿಂದಲೂ, ಆ ಬ್ರಹ್ಮದ ಅಪರೋಕ್ಷರೂಪವಾದ ಅಮೃತಪದಕ್ಕೆ ಉಪ
ಯುಕ್ತಗಳಾಗದಿರುವದರಿಂದಲೂ ಮುಕ್ತಿಯನ್ನು ಕುರಿತು ಸಾಧನಗಳಲ್ಲವು. ಯಾಕಂದರೆ—
ಅಜ್ಞಾನಗ್ರಂಥಿಯು ಅಪರೋಕ್ಷವಾಗಿರುವದರಿಂದ ಅಪರೋಕ್ಷಜ್ಞಾನದಿಂದಲೇ ಅದರ ನಾಶವ
ನ್ನು ಹೇಳಬೇಕೇ ಹೊರತು ಪರೋಕ್ಷಧ್ಯಾನದಿಂದ ಹೇಳಕೂಡದು. ಹೇಳಿದ್ದಾದರೆ ಯುಕ್ತ
ವಾಗುವದಿಲ್ಲ. ಈ ವಿಷಯದಲ್ಲಿ ವಿಷ್ಣ್ವಾದಿಪದಗಳು ಯಾವ ಶಿವನ ಪದದಿಂದ ನ್ಯೂನಗಳಾಗಿ
ರುವವೋ ಆ ಶಿವನ ಸಾಕ್ಷಾತ್ಕಾರವಾಗಲು ಹೃದಯಗ್ರಂಥಿಯು (ಅಜ್ಞಾನವು) ಭೇದಿಸಲ್ಪಡು
ತ್ತದೆ. ಸಮಸ್ತ ಸಂಶಯಗಳೂ ವಿಚ್ಛಿನ್ನಗಳಾಗುವವು. ಸಮಸ್ತ ಕರ್ಮಗಳು ಕ್ಷಯವಾಗುವವು.
ಎಂಬ ತಾತ್ಪರ್ಯವುಳ್ಳ ಶ್ರುತಿಯು ಪ್ರಮಾಣವಾಗಿದೆ. ಇದರಿಂದ ಅಪರೋಕ್ಷಜ್ಞಾನವೇ ಅಜ್ಞಾನ
ಗ್ರಂಥಿಗೆ ನಾಶಕವೆಂದು ತಿಳಿದುಬರುತ್ತದಲ್ಲದೆ, ಪರೋಕ್ಷಧ್ಯಾನವು ನಾಶಕವೆಂದು ತಿಳಿದುಬರು
ವದಿಲ್ಲ. ಎಲ್ಲೆ ಶಿವಾದ್ವೈತಿಯೇ! ಇದಲ್ಲದೆ ನಿರಾಲಂಬವಾಗಿಯೂ ಸರ್ವವ್ಯಾಪಕವಾಗಿಯೂ
ಇರುವ ಬ್ರಹ್ಮವು ಮೂರ್ತಪದಾರ್ಥವಾಗದಿರುವದರಿಂದ ಹೃದಯಾದಿ ಸ್ಥಾನದಲ್ಲಿ ಬ್ರಹ್ಮವನ್ನು
ಉಪಾಸ್ಯವನ್ನಾಗಿ ಕಲ್ಪಿಸಿ, ಅದನ್ನು ಆವಲಂಬನ ಮಾಡಿಕೊಂಡು ಉಪಾಸನೆ ಮಾಡುತ್ತಾ
ಹೋಗುತ್ತಿರಲಿಕ್ಕೆ ಆ ಉಪಾಸನೆಯಿಂದ ಅಮೃತತ್ವವು (ಮುಕ್ತಿಯು) ಸಾಧ್ಯವಾಗುವದೆಂದರೆ

ಶ್ಚಾಜ್ಞಾನಾದ್ಯಶುದ್ಧೇಃ ಸತ್ಯತ್ವಾಭಾವಾತ್ ತಸ್ಯಾಃ ಜ್ಞಾನಮಾತ್ರಬಾಧ್ಯತ್ವಾತ್ ತಸ್ಮಾತ್ಸತ್ಯತ್ವೇಚ ಭವದಭಿಮತಧ್ಯಾನಾದಪಿ ನಾಶಾಯೋಗಾತ್. ಕಿಂಚಧ್ಯಾನಂ ನಾಮ ಚಿಂತಾ, ಚಿಂತಾಚಸ್ಮೃತಿಃ ಧ್ಯೈ ಚಿಂತಾಯಾಂ ಚಿತಿಸ್ಮೃತ್ಯಾಮಿತ್ಯನುಶಾಸನಾತ್ ಸ್ಮರಣಂಚ ಪೂರ್ವಾನುಭೂತಸ್ಯ ಸಂಭವತಿ ನಚತತ್ಸಂಭವೋಸ್ತಿ ನಿರ್ಗುಣ ನಿರಂಜನಾನಂದೈಕರಸಸ್ಯ ಪರಂಜ್ಯೋತೀರನಿರ್ದೇಶಸ್ಯಾನುಪಮಸ್ಯ ಪೂರ್ವಾನನುಭತಸ್ಯ ಪರಬ್ರಹ್ಮಣಃ ಶಿವಲಿಂಗಸ್ಯ | ಅನ್ಯಥಾ ಸಾ ಗಂಗಾ ಸಾಮಾತಾ. ಇತ್ಯಾದಿವತ್ ಕಾಲಾಂತರದೇಶಾಂತರವರ್ತಿತ್ವಸ್ಯಾವಶ್ಯಕತ್ವಾಪರಿಚ್ಛಿನ್ನತ್ವಂ ಸ್ಯಾತ್ ಸ್ಯಾಚ್ಚ "ಸರ್ವವ್ಯಾಪೀಚ ಭಗವಾನ್ ತಸ್ಮಾತ್ಸರ್ವಗತಃ ಶಿವಃ" ಇತ್ಯಾದ್ಯನೇಕ ಶ್ರುತೀತಿಹಾಸಪುರಾಣಾದೇರ್ವಿರೋಧಃ ಕಿಂ

---

ಆ ಮುಕ್ತಿಯು ನಿತ್ಯವಾಗಲಾರದು ಮೊದಲು ಆ ಅಮೂರ್ತವಾದ ಬ್ರಹ್ಮವನ್ನು ಚಿಕ್ಕದಾದ ಹೃದಯದಲ್ಲಿ ತರುವುದೇ ಅಸಂಭವವು ಅಂದಮೇಲೆ ಅದರ ಅವಲಂಬನ ಉಪಾಸನೆಗಳಂತೂ ದೂರೇ ಉಳಿದವು. ಆ ಉಪಾಸನೆಯಿಂದ ಮುಕ್ತಿಯಂಬುವ ಮಾತಂತೂ ಗಗನ ಪುಷ್ಪದಂತಾಯಿತು. ಆದುದರಿಂದಲೇ ಆತ್ಮೋಪಾಸನೆಯಿಂದ ಅಮೃತತ್ವವು ಹುಟ್ಟುವದೇನು ? ಇಲ್ಲ. ಕಿಂತು ನಿತ್ಯಾತ್ಮ ಸ್ವಭಾವದಿಂದಲೇ ಅಮೃತತ್ವವನ್ನು ಹೊಂದುತ್ತಾನೆ ಅಲ್ಲದೆ ಆಲಂಬನಪೂರ್ವಕವಾಗಿ ಹೊಂದುವದಿಲ್ಲ ಎಂದು ಶಂಕರ ಭಗವತ್ಪಾದಾಚಾರ್ಯರು ಹೇಳಿರುವರು. ಅಂದರೆ ಹೃದಯಾದಿ ಸ್ಥಾನದಲ್ಲಿ ಯಾವದಾದರೊಂದು ಮೂರ್ತಿಯನ್ನು ಅವಲಂಬಿಸಿ ಅದರಧ್ಯಾನದಿಂದ ಮುಕ್ತಿಯು ಹುಟ್ಟುವದಿಲ್ಲ. ಕಿಂತು ಕೇವಲ ತನ್ನ ನಿತ್ಯವಾದ ಆತ್ಮಸ್ವಭಾವದಿಂದಲೇ ಅಮೃತತ್ವಪ್ರಾಪ್ತಿಯಾಗುವದು. (ಅಮೃತತ್ವವು ಸ್ವತಃ ಸಿದ್ಧವಾದದ್ದೇ) ಎಂದು ಇವರ ತಾತ್ಪರ್ಯವು ಇರುವದು ಆದಕಾರಣ ಎಲೈ ಶಿವಾದ್ವೈತಿಯೇ! ನಿತ್ಯನೂ ಶುದ್ಧನೂ ಬುದ್ಧನೂ ಮುಕ್ತಸ್ವಭಾವವುಳ್ಳವನೂ ಆದ ಆತ್ಮನ ಅಜ್ಞಾನರೂಪ ಅಶುದ್ಧಿಯು ಪರಮಾರ್ಥತಃ ಇಲ್ಲದಿರುವದರಿಂದ ಅದು ಕೇವಲ ಜ್ಞಾನವೊಂದರಿಂದಲೇ ನಶ್ವರವಾದದ್ದೆಂದು ಹೇಳಬೇಕು. ಆ ಅಜ್ಞಾನವೆಂಬ ಅಶುದ್ಧಿಯು ವಸ್ತುತಃ ಸತ್ಯವೆಂದರೆ ನೀನು ಹೇಳುವ ಧ್ಯಾನದಿಂದಲಾದರೂ ಅದರ ನಾಶವಾಗಲಾರದು. ಮತ್ತು ಧ್ಯಾನವೆಂದರೆ ಚಿಂತನೆಯು ಚಿಂತನೆಯೆಂದರೆ ಸ್ಮೃತಿಯು. ಈ ವಿಷಯದಲ್ಲಿ "ಧ್ಯೈ ಚಿಂತಾಯಾಂ" (ಧ್ಯೈ ಎಂಬ ಧಾತುವು ಚಿಂತೆಯೆಂಬರ್ಥದಲ್ಲಿರುವದು) "ಚಿತಿ ಸ್ಮೃತ್ಯಾಂ" (ಚಿಂತೆಯೆಂಬ ಅರ್ಥವುಳ್ಳ ಚಿತ್ ಎಂಬ ಧಾತುವು ಸ್ಮೃತಿಯೆಂಬರ್ಥದಲ್ಲಿರುವದು.) ಅಂದಮೇಲೆ ಶಿವಧ್ಯಾನದಿಂದ ಮುಕ್ತಿಯೆನ್ನುವ ಎಲೈ ಶಿವಾದ್ವೈತಿಯೇ! ಧ್ಯಾನವೆಂದರೆ ಸ್ಮರಣವೆಂದರ್ಥವಾಯಿತಲ್ಲವೆ. ಈ ಸ್ಮರಣವು ಪೂರ್ವಾನುಭವವಿಲ್ಲದಿದ್ದರೆ ಆಗಲಾರದು. ಶಿವನ ಪೂರ್ವಾನುಭವವಂತೂ ಇಲ್ಲವೇ ಇಲ್ಲ. ನಿರ್ಗುಣನೂ, ನಿರಂಜನನೂ, ಆನಂದವೇ ಮುಖ್ಯವಾದ ರಸವುಳ್ಳವನೂ, ಪರಂಜ್ಯೋತಿಸ್ವರೂಪನೂ ಯಾವದರಿಂದಲೂ ತೋರಿಸಲಶಕ್ಯನೂ ಅಸದೃ

ಚ ನೀರೂಪಸ್ಯ ಪರಬ್ರಹ್ಮಣ ಶ್ಚಾಕ್ಷುಷಾದ್ಯಯೋಗಾತ್" ಅರೂಪಮದ್ಭುತ ಮಿತಿಶ್ರುತೇಃ ನಚಮನಸಾಪ್ಯವಗಾಹನೀಯತ್ವಂ ಸಂಭವತಿ | ಏತಸ್ಮಿನ್ ದೃಷ್ಟೇ ಅಪರಸ್ಯ ತತ್ಸಜಾತೀಯಸ್ಯ ಮನಸಾವಗಾಹನಸ್ಯಯುಕ್ತತ್ವಾತ್ ದೃಷ್ಟೇ ಕಲಭೇ ಗಜರಾಜಸ್ಯ ಮಹೇಂದ್ರ ವಾಹನಸ್ಯಾಪಿ ಮನಸಾವಗಾಹಸಂಯುಜ್ಯತೇ | ನೀ ರೂಪಸ್ಯ ಸಮಧಿಕ ಶೂನ್ಯಸ್ಯ ಮನಸಾವಗಾಹನಸ್ಯಾಯುಕ್ತತ್ವಾತ್ ಯದಪಿಸ ಗುಣಧ್ಯಾನಂ ತದಪ್ಯಯುಕ್ತಂ ಧ್ಯಾನಸ್ಯ ಸ್ಮರಣರೂಪಸ್ಯಾನುಭವಮಂತರೇಣಾ ಪ್ರವೃತ್ತೇಃ | ಅನುಭೂತೇಪಿತಸ್ಮಿನ್, ಕರಚರಣಾದಿವಿಶಿಷ್ಟೇ ಚಂದ್ರಚೂಡೆ ಮಾ ಯಾಪಾಶವಿಶಿಷ್ಟ ತತ್ಪೂಜಾಧ್ಯಾನಾದಿಸಾಧನ ಸಮುದಾಯಸ್ಯ ಅಸತ್ಫಲಪ ರ್ಯವಸಾಯಿತ್ವಾಪತ್ತೇಃ ಶಶಶೃಂಗಾಯತೆ ಸಗುಣ ನಿರ್ಗುಣೆ ಧ್ಯಾನೋಪಸ

---

ಶನೂ ಪೂರ್ವದಲ್ಲಿ ಅನುಭವಿಸಲ್ಪಡದೆ ಇದ್ದವನೂ ಆದ ಪರಬ್ರಹ್ಮ ಪರಶಿವಲಿಂಗದ ಸ್ಮರಣರೂಪ ಧ್ಯಾನವನ್ನು ಮುಕ್ತಿಗೆ ಸಾಧನವನ್ನಾಗಿ ಹೇಳುವದು ಅಯುಕ್ತವಲ್ಲವೇ ? ಇಂಥ ಪರಶಿವನಿಗೆ ಆ ಸ್ಮರಣರೂಪಧ್ಯಾನವನ್ನು ಕಲ್ಪಿಸಿದರೆ ಆ ಗಂಗೆಯು ಆ ತಾಯಿಯು ಎಂಬಂತೆ ಪರಶಿವನಿಗೆ ಕಾಲಾಂತರದಲ್ಲಿರುವಿಕೆಯನೂ ದೇಶಾಂತರದಲ್ಲಿರುವಿಕೆಯನ್ನೂ ಹೇಳಬೇಕಾಗುವದಲ್ಲದೆ, ಬೇರೆ ಕಾಲ ಬೇರೆ ದೇಶಗಳಲ್ಲಿ ಇಲ್ಲದೆ ಇರುವಿಕೆಯನ್ನು ಹೇಳಬೇಕಾಗುವದು. ಆದಕಾರಣ ಪರಶಿವಬ್ರಹ್ಮವು ಪರಿಚ್ಛಿನ್ನವಾಗಬೇಕಾಗುವದು. ಅದು ಪರಿಚ್ಛಿನ್ನವಾದಲ್ಲಿ ಸರ್ವವ್ಯಾಪಕನೂ ಸರ್ವಕಡೆಯಲ್ಲಿರುವವನೂ ಭಗವಂತನೂ ಶಿವನು ಎಂಬರ್ಥವುಳ್ಳ ಶ್ರುತ್ಯಾದಿಗಳಿಗೆ ವಿರುದ್ಧವಾ ಗುವದು. ಮತ್ತು ಆ ಪರಶಿವಬ್ರಹ್ಮದ ಪೂರ್ವಾನುಭವವು ಪ್ರತ್ಯಕ್ಷರೂಪವೆಂದು ಹೇಳಲಿಕ್ಕೆ ಆಗುವದಿಲ್ಲಾ. ಯಾಕಂದರೆ ಅದಕ್ಕೆ ನೀಲಪೀತಾದಿ ರೂಪಗಳಿರುವದಿಲ್ಲಾ. "ಅರೂಪಮದ್ಭು ತಂ" ಎಂದು ಶ್ರುತಿ ಇರುವದು. ಮತ್ತು ಮಾನಸ ಪ್ರತ್ಯಕ್ಷರೂಪ ಪೂರ್ವಾನುಭವವನ್ನೂ ಹೇಳ ಲಿಕ್ಕೆ ಆಗುವದಿಲ್ಲಾ. ಒಂದು ಪದಾರ್ಥವು ಪ್ರತ್ಯಕ್ಷವಾಗಿ ನೋಡಲ್ಪಡುತ್ತಿರಲಿಕ್ಕೆ ಮತ್ತೊಂ ದು ಅದರ ಸಜಾತೀಯವಾದ ಪದಾರ್ಥಕ್ಕೆ ಮನಸ್ಸಿನಿಂದ ಅವಗಾಹನೆಯು ಯುಕ್ತವಾಗುವ ದು. ಒಂದು ಆನೆಯು ನೋಡಲ್ಪಡುತ್ತಿರಲಿಕ್ಕೆ ಅದಕ್ಕೆ ಸಜಾತೀಯವಾದ ಗಜರಾಜವಾದ ಮಹೇಂದ್ರನ ವಾಹನಕ್ಕೆ ಮನಸ್ಸಿನಿಂದ ಅವಗಾಹನೆಯು ಯುಕ್ತವಾಗುವದು. ರೂಪಯಿಲ್ಲದಿ ರುವ ತನಗಿಂತಲೂ ಅಧಿಕ ವಸ್ತುವು ಸಮಾನ ವಸ್ತುವು ಇಲ್ಲದಿರುವ ಪರಬ್ರಹ್ಮಕ್ಕೆ ಮನಸ್ಸಿನಿಂದ ಅವಗಾಹನೆಯು (ಪ್ರತ್ಯಕ್ಷವು) ಯುಕ್ತವಾಗುವದಿಲ್ಲಾ. ಸಗುಣಮೂರ್ತಿಯ ಧ್ಯಾನವು ಕೂಡ ಯುಕ್ತವಾಗುವದಿಲ್ಲಾ. ಆ ಸ್ಮರಣ ರೂಪವಾದ ಧ್ಯಾನವು ಆ ಸಗುಣಮೂರ್ತಿಯ ಪೂರ್ವಾ ನುಭವವಿಲ್ಲದೆ ಆಗಲಾರದಷ್ಟೆ. ಕರಚರಣಾದಿ ಅವಯವಗಳಿಂದ ಕೂಡಿದ ಮಾಯಾಪಾಶವಿಶಿಷ್ಟ ವಾದ ಚಂದ್ರಚೂಡನಾದ ನೀಲಕಂಠಮೂರ್ತಿಯು ಪೂರ್ವಾನುಭವಕ್ಕೆ ವಿಷಯವಾದರೂ ಆ ಮೂರ್ತಿಯ ಪೂಜಾಧ್ಯಾನ ಮೊದಲಾದ ಸಾಧನೆಗಳು ಅಸತ್ಫಲವುಳ್ಳವುಗಳಾಗುವವು.

ರ್ಣನಂ ಇತಿ ಪೂರ್ವಪಕ್ಷೆ ವಿಕ್ಷೇಪೇಪ್ರಾಪ್ತೇ ಬ್ರೂಮಃ| ಸ್ಮೃತಿರೂಪಸ್ಯ ಧ್ಯಾನ
ಸ್ಯದಾರ್ಢ್ಯೇ ತಸ್ಯದರ್ಶನರೂಪತ್ವಾಭ್ಯುಪಗಮಾತ್ | ನ "ತಸ್ಮಿನ್‌ದೃಷ್ಟೇಪರಾ
ವರೇ" ಇತಿ ಶ್ರುತಿವಿರೋಧಃ | ಅನ್ಯಥಾ "ಆಹಾರಶುದ್ಧೌ ಸತ್ವಶುದ್ಧಿಃ ಸತ್ವಶು
ದ್ಧೌಧ್ರುವಾಸ್ಮೃತಿಃ ಸ್ಮೃತಿ ಲಂಭೇ (ಸ್ಮೃತಿಧ್ರೌವ್ಯೇ) ಸರ್ವಗ್ರಂಥೀನಾಂ
ವಿಪ್ರಮೋಕ್ಷಃ" ಇತ್ಯಾದಿಶ್ರುತಿವಿರೋಧಃಸ್ಯಾತ್. ಯದಪ್ಯುಕ್ತಂ ಸರ್ವವ್ಯಾ
ಪಕಸ್ಯಾಖಂಡಸ್ಯ ಮೂರ್ತತ್ವಾಭಾವಾದಿತಿ ತದಪಿಶ್ರುತಿವಿರುದ್ಧಂ | "ಇಷ್ಟ
ಮೂರ್ಜಂತಪಸಾಽನುಯಚ್ಛತಿ ಸರ್ವದಾ" "ತತ್ಪ್ರಾಣೇಷ್ವಂತರ್ಮನಸೋಲಿಂ
ಗಮಾಹುಃ" "ಭಾವಗ್ರಾಹ್ಯಮನೀಡಾಖ್ಯಂ ಭಾವಾಭಾವಕರಂ ಶಿವಂ ಕಲಾ
ಸರ್ಗಕರಂದೇವಂಯೇವಿದುಸ್ತೇಜಹುಸ್ತನುಂ" ಇತ್ಯಾದಿಶ್ರುತ್ಯಾ ಸಚ್ಚಿದಾನಂ

---

ಯಾಕಂದರೆ ತಾನೇ ಮಾಯಾಪಾಶದಿಂ ಬಿಗಿಯಲ್ಪಟ್ಟಿರುವವರಿಂದ ತನ್ನನ್ನು ಅವಲಂಬಿಸಿರುವ
ಅನ್ಯರ ಪಾಶಗಳನ್ನು ಛೇಧಿಸಲಾರದು. ಆದುದರಿಂದ ಸಗುಣ ನಿರ್ಗುಣ ಧ್ಯಾನವು ಮುಕ್ತಿಯ
ಸಾಧನವೆಂದು ಹೇಳುವದು ಅತ್ಯಂತ ಅಯುಕ್ತವಾದದ್ದು ಎಂಬದಾಗಿ ಅನೇಕ ಆಕ್ಷೇಪಗಳನ್ನು
ಬ್ರಹ್ಮಾದ್ವೈತಿಯು ಶಿವಾದ್ವೈತಿಯ ಮೇಲೆ ಮಾಡಲು ಶಿವಾದ್ವೈತಿಯು ಬಹು ಸರಸವಾಗಿ
ಸಮಾಧಾನವನ್ನು ಹೇಳುವನು. ಏನಂದರೆ—ಎಲೈ ವಿವರ್ತವಾದಿಯಾದ ಬ್ರಹ್ಮಾದ್ವೈತಿಯೆ!
ಧ್ಯಾನವು ಸ್ಮರಣರೂಪವಾಗುವದು. ಆದ್ದರಿಂದ ಅದು ಮುಕ್ತಿಗೆ ಕಾರಣವಲ್ಲವು. "ತಸ್ಮಿ
ನ್‌ದೃಷ್ಟೇಪರಾವರೇ" ಎಂಬುವ ಶ್ರುತಿಯಿಂದ ಪ್ರತ್ಯಕ್ಷವೇ ಮುಕ್ತಿಗೆ ಕಾರಣವೆಂದು ಹೇಳುವೆಯ
ಲ್ಲವೆ? ಸ್ಮೃತಿರೂಪವಾದ ಧ್ಯಾನವು ಅಭ್ಯಾಸವಶದಿಂದ ಪ್ರತ್ಯಕ್ಷರೂಪವೇ ಆಗುವದು. ಆದ
ಕಾರಣದಿಂದ "ತಸ್ಮಿನ್‌ದೃಷ್ಟೇಪರಾವರೇ" ಎಂಬ ಶ್ರುತಿಗೆ ವಿರೋಧವಿಲ್ಲವು. ಆದ್ದರಿಂದ ಆಬ್ರಹ್ಮದ
ಪ್ರತ್ಯಕ್ಷವೇ ಮುಕ್ತಿಗೆ ಕಾರಣವಲ್ಲದೆ ಧ್ಯಾನವು ಕಾರಣವಲ್ಲವೆಂಬ ವಿಷಯದಲ್ಲಿ ಮೇಲೆ ಹೇ
ಳಿದ ಶ್ರುತಿಯನ್ನೇ ನೀನು ಪ್ರಬಲಪ್ರಮಾಣವಾಗಿಟ್ಟುಕೊಂಡು ಉದ್ಘೋಷಿಸುವದು ಸರಿಯಲ್ಲ
ವು ಎಲೈ ಶಿವಾದ್ವೈತಿಯೇ! ಧ್ಯಾನವೇ ಅಭ್ಯಾಸವಶದಿಂದ ಪ್ರತ್ಯಕ್ಷರೂಪವಾಗುವದೆನ್ನುವ
ನಿನ್ನಮಾತನ್ನೇ ವೇದಪ್ರಮಾಣವನ್ನಾಗಿ ತಿಳಿಯಬೇಕೇನು; ಸ್ಮೃತಿಯು ಪ್ರತ್ಯಕ್ಷರೂಪವಾಗುವದೆ
ನ್ನುವಲ್ಲಿ ಯಾವ ಪ್ರಮಾಣವನ್ನು ಹೇಳುವಿಯೆ ಅಂದರೆ ಆಹಾರದ ಶುದ್ಧಿಯಾಗಲು ಸತ್ವಶುದ್ಧಿ
ಯು. ಸತ್ವಶುದ್ಧಿಯಾಗಲು ದೃಢವಾದ ಸ್ಮೃತಿಯು. ಸ್ಮೃತಿಯು ದೃಢವಾಗಲು ಸರ್ವ ಅಜ್ಞಾ
ನಾದಿ ಗ್ರಂಥಿಗಳ ಬಿಡುಗಡೆಯು. ಎಂಬರ್ಥವುಳ್ಳ ಪ್ರಸಿದ್ಧವಾದ ಶ್ರುತಿಯೇ ಪ್ರಮಾಣವಾಗಿರು
ವದು. ಬ್ರಹ್ಮಾದ್ವೈತಿಯೇ ಈಗ ಸ್ವಲ್ಪ ವಿಚಾರಿಸು. ನಿನ್ನ ಪಕ್ಷಕ್ಕೆ ಅನುಕೂಲವೆಂದು ತಿಳಿ
ದುಕೊಂಡು ನೀನು ತೆಗೆದುಕೊಂಡ "ತಸ್ಮಿನ್‌ದೃಷ್ಟೇಪರಾವರೇ" ಎಂಬ ಶ್ರುತಿಯು ಬ್ರಹ್ಮಾತ್ಮೈ
ಕ್ಯಪ್ರತ್ಯಕ್ಷವೇ ಸರ್ವ ಅಜ್ಞಾನಾದಿ ಗ್ರಂಥಿಗಳ ನಾಶಕ್ಕೆ ಕಾರಣವೆಂದು ಹೇಳುತ್ತದೆ. ನನ್ನ
ಪಕ್ಷಕ್ಕೆ ಅನುಕೂಲವೆಂದು ತೆಗೆದುಕೊಂಡ 'ಸ್ಮೃತಿಧ್ರೌವ್ಯೇ, ಸರ್ವಗ್ರಂಥೀನಾಂ ವಿಪ್ರಮೋ

ದಾತ್ಮಕಸ್ಯ ಘೃತಕಾಠಿಣ್ಯನ್ಯಾಯೇನ ಲಿಂಗಮೂರ್ತಿತ್ವಾವಗಮಾತ್ | ಅಚಿಂತ್ಯಾನಂತಶಕ್ತಿಕಸ್ಯ ಪರಶಿವಸ್ಯ. "ಮನಃಪ್ರತ್ಯಕ್ಚಿತ್ತೇ ಸವಿಧಮವಧಾಯಾತ್ತಮರುತಃ | ಪ್ರಹೃಷ್ಯದ್ರೋಮಾಣಃ ಪ್ರಮದಸಲಿಲೋತ್ಸಂಗಿತದೃಶಃ || ಯದಾಲೋಕ್ಯಾಹ್ಲಾದಂ ಹ್ರದಇವ ನಿಮಜ್ಜ್ಯಾಮೃತಮಯೇ | ದಧತ್ಯಂತಸ್ತತ್ತ್ವಂ ಕಿಮಪಿಯಮಿನಸ್ತತ್ಕಿಲಭವಾನ್ || ಉಪಾಸನಾರ್ಥಮಂತಸ್ಥಂ ಪರಿಚ್ಛಿನ್ನಂ ಸ್ವಮಾಯಯಾ | ಇತ್ಯುಕ್ತಪ್ರಕಾರೇಣ ವಾಸ್ತವಪರಿಚ್ಛೇದಸಂಭವಾತ್. ಹೃದಯಪುಂಡರೀಕಾದ್ಯುಪಾಸನಂ ಸಂಗಚ್ಛತೇ. 'ಅಣೋರಣೀಯಾನ್ಮಹತೋಮಹೀಯಾನ್', ಇತಿಶ್ರುತೇಃ ಸಚಾಮೃತತ್ವಸ್ಯಾನಿತ್ಯತ್ವಾಪತ್ತಿಃ | ಸರ್ವಸ್ಯಾಪಿ ನಿತ್ಯತ್ವಾಭ್ಯುಪಗಮಾತ್ ತಸ್ಯನಿತ್ಯತ್ವೇಪಿ ತದಾವರಕಸಂಕೋಚ ಕಲಾಭಿಭವಾರ್ಥತ್ವಾತ್

---

ಕ್ಷಃ" ಎಂಬ ಶೃತಿಯು ದೃಢವಾದ ಸ್ಮೃತಿಯೇ ಸರ್ವ ಅಜ್ಞಾನಾದಿ ಗ್ರಂಥಿಗಳ ನಾಶಕ್ಕೆ ಕಾರಣವೆಂದು ಹೇಳುತ್ತದೆ. ಈ ಎರಡು ಶ್ರುತಿಗಳ ವಿರೋಧವನ್ನು ವೈದಿಕನಾದ ನೀನು ಪರಿಹರಿಸಬೇಕಲ್ಲವೇ ? ದೃಢವಾದ ಸ್ಮೃತಿಯು ಪ್ರತ್ಯಕ್ಷರೂಪವಾಗುವದು. ಅನ್ನುವ ನನ್ನ ಮಾತನ್ನು ಬಿಟ್ಟು ನೀನು ವಿರೋಧ ಹೇಗೆ ಪರಿಹರಿಸುವಿಯೆ ? ಆದ್ದರಿಂದ ಸ್ಮೃತಿಯು ದೃಢವಾಗಲು ಪ್ರತ್ಯಕ್ಷರೂಪವಾಗುವದು. ಧ್ಯಾನವು ಮುಕ್ತಿಗೆ ಕಾರಣವಲ್ಲವೆನ್ನುವ ನಿನ್ನ ಪಕ್ಷವು ದುರ್ಬಲವಾದದ್ದು. ಆದುದರಿಂದ ಆ ನಿನ್ನ ಪಕ್ಷವನ್ನು ಬಿಟ್ಟು ನನ್ನ ಪಕ್ಷವನ್ನನುಸರಿಸಿ ಸದ್ಗತಿಯನ್ನು ಹೊಂದುವದು ಯೋಗ್ಯವೆಂದು ಕಂಡುಬರುತ್ತದೆ. ಎಲೈ ಬ್ರಹ್ಮಾದ್ವೈತಿಯೇ ! ಸರ್ವವ್ಯಾಪಕವಾದ ಅಖಂಡವಾದ ಪರಬ್ರಹ್ಮವು ಮೂರ್ತಪದಾರ್ಥವಾಗದಿರುವದರಿಂದ ಅದರ ಧ್ಯಾನವೇ ಮನಸ್ಸಿನಲ್ಲಿ ಸಂಭವಿಸಲಾರದು. ಎಂಬ ಎರಡನೇ ನಿನ್ನ ಆಕ್ಷೇಪಣೆಯಾದರೂ ಶ್ರುತಿವಿರುದ್ಧವಾದದ್ದೇ ಆಗಿದೆ. "ಇಷ್ಟಮೂರ್ಜಂ" ಎಂಬ ಶೃತಿಯಿಂದ ಇಷ್ಟಲಿಂಗವೂ, "ತತ್ಪ್ರಾಣೇಷ್ವಂತಃ" ಎಂಬ ಶೃತಿಯಿಂದ ಪ್ರಾಣಲಿಂಗವೂ, "ಭಾವಗ್ರಾಹ್ಯಂ" ಎಂಬ ಶೃತಿಯಿಂದ ಭಾವಲಿಂಗವೂ ಹೇಳಲ್ಪಡುವ ಕಾರಣ, ಆ ಸಚ್ಚಿದಾನಂದರೂಪ ಪರಬ್ರಹ್ಮವೇ ಕರಗಿದ ತುಪ್ಪವು ಗಟ್ಟಿಗೊಂಡಂತೆ ಲಿಂಗಮೂರ್ತಿಯ ಸ್ವರೂಪವಾಗಿದೆಯೆಂದು ಕಂಡುಬರುವಕಾರಣ, ಪರಬ್ರಹ್ಮವು ಮೂರ್ತಪದಾರ್ಥವಲ್ಲವಾದದರಿಂದ ಮನಸ್ಸಿನಲ್ಲಿ ಅದರ ಧ್ಯಾನವು ಸಂಭವಿಸುವದಿಲ್ಲವೆಂಬುವದು ಶೃತಿವಿರುದ್ಧವು. ಆ ಪರಬ್ರಹ್ಮವು ತನ್ನ ಅದ್ಭುತ ಶಕ್ತಿಯಿಂದ ಮೂರ್ತಸ್ವರೂಪವೂ ಅಮೂರ್ತಸ್ವರೂಪವೂ ಕೂಡ ಆಗಿರುವದೆಂದು ಮೇಲಣ ಶೃತಿಗಳಿಂದ ಸಿದ್ಧವಾಗುವದಲ್ಲದೆ, ಇಂದ್ರಿಯ ನಿಗ್ರಹದಲ್ಲಿ ಶೂರರಾದವರು ಅಂತಸ್ತತ್ವವನ್ನು (ಪ್ರಾಣಲಿಂಗವನ್ನು) ಧರಿಸುತ್ತಾರೆ. ಎಂಬರ್ಥವುಳ್ಳ ಮಹಿಮ್ನಸ್ತೋತ್ರವನ್ನು ರಚಿಸಿದಪುಷ್ಪದಂತನು ಮನಸ್ಸಿನಲ್ಲಿ ಆ ಬ್ರಹ್ಮದ ಧ್ಯಾನವು ಸಂಭವಿಸುತ್ತದೆಂಬ ವ ಅಭಿಪ್ರಾಯವನ್ನು ಕೊಟ್ಟಿದ್ದಾನೆ. ಅಲ್ಲದೆ ಆ ಬ್ರಹ್ಮದ ವಾಸ್ತವಿಕವಾದ ಮೂರ್ತಸ್ವರೂಪವನ್ನೂ ಕೂಡ ಅಂಗೀಕರಿಸುವನೆಂದು ಸ್ಪಷ್ಟವಾಗುವದು. ಇದಲ್ಲದೆ ಆ ಪರಬ್ರ

ಧ್ಯಾನಾದೇರುಪಾಯಸ್ಯ ಅಜ್ಞಾನಾದಿ ಸಂಕೋಚಸ್ಯ ಸತ್ಯತ್ವೇಪಿ ತನ್ನಿವೃತ್ತೇ ರುಪಪನ್ನತ್ವಾತ್ ಸತ್ಯಸ್ಯ ತಾಮ್ರಾದೇಃ ಸುವರ್ಣತ್ವ ದಶಾವಚ್ಛೇದೇನ ನಿವೃತ್ತಿ ಸಂಭವಾತ್. ಕಾರ್ಯನಿವೃತ್ತಿರ್ನಾಮ ಕಾರಣರೂಪೇಸ್ಥಿತಿಃ. ತಸ್ಮಾದ್ದುಸ್ತರ ಭವನಿಸ್ತರಣದೃಢೋಪಾಯ ಧ್ಯಾನಾದಿನಾ ಅಮೃತತ್ವಪ್ರಾಪ್ತೇಃ ಸಿದ್ಧತ್ವಾತ್, ಕೇ ವಲೇನ ವಾಕ್ಯಜಸ್ಯ ಜ್ಞಾನೇನ ಸರ್ವಗ್ರಂಥಿವಿಚ್ಛೇದಾಭಾವಾತ್ "ಯದಾಸ ರ್ವೇಪ್ರಭಿದ್ಯಂತೆ ಹೃದಯಸ್ಯೇಹಗ್ರಂಥಯಃ ಅಥಮರ್ತ್ಯೋಮೃತೋಭವತಿ ಏತಾವದನುಶಾಸನಂ" ಇತಿಶ್ರುತೇಃ ಹೃದಯಗ್ರಂಥಿಭೇದಾಭಾವೇ ಅಮೃತತ್ವಾ ಪ್ರಾಪ್ತೇಃ | ಹೃದಯಾಧಿಕರಣಕಗ್ರಂಥೇಃ ಭೇದಕಸ್ಯಾಪಿ ತದಧಿಕರಣಕತ್ವಂವ ಕ್ತವ್ಯಂ | ಅನ್ಯಥಾ ಏಕತ್ರಸ್ಥಿತಸ್ಯಾ ನ್ಯತ್ರಸ್ಥಿತೇನ ಭೇದ್ಯತ್ವಂ ಸ್ಯಾತ್. ನಚ ಹೃದಯಾಧಿಕರಣಕಾಖಂಡಬ್ರಹ್ಮಾಕಾರವೃತ್ತೇರೇವ ತದ್ಭೇದಕತ್ವಮಿತಿವಾಚ್ಯಂ

---

ಹ್ಮವು ತನ್ನ ಮಾಯಾಶಕ್ತಿಯಿಂದ ಭಕ್ತರ ಉಪಾಸನೆಯ ಸಲುವಾಗಿ ಅಂತಸ್ಥವೂ ಪರಿಚ್ಛಿನ್ನವೂ ಆಗಿರುವದೆಂಬುವ ರೇಣುಕ ಭಗವತ್ಪಾದರ ವಾಕ್ಯದಿಂದ ಆ ಪರಬ್ರಹ್ಮಕ್ಕೆ ಪರಿಚ್ಛೇದವು ಯಥಾ ರ್ಥವಾದದ್ದೆಂದು ಸಿದ್ಧವಾಗುತ್ತದೆ. ಆದ್ದರಿಂದ ಹೃತ್ಪುಂಡರೀಕಾದಿಯಲ್ಲಿ ಆ ಪರಬ್ರಹ್ಮಧ್ಯಾ ನವು ಸಂಭವಿಸುತ್ತದೆ ಎಲ್ಲೈ ಬ್ರಹ್ಮಾದ್ವೈತಿಯೇ! "ಅಣೋರಣೀಯಾನ್ ಮಹತೋ ಮಹೀಯಾ ನ್" ಎಂಬ ಶೃತಿಯಿಂದ ಆ ಪರಬ್ರಹ್ಮದ ಮೂರ್ತಾಮೂರ್ತಸ್ವರೂಪಗಳು ಪಾರಮಾರ್ಥಿಕಗ ಳೆಂದು ಸ್ಪಷ್ಟವಾಗುತ್ತದಲ್ಲವೇ ? ಆದ್ದರಿಂದ ಮನಸ್ಸಿನಲ್ಲಿ ಆ ಬ್ರಹ್ಮದ ಧ್ಯಾನವು ಸಂಭವಿಸ ಲಾರದೆಂಬುವ ನಿನ್ನ ಪೂರ್ವಪಕ್ಷವು ಅಸಂಗತವೇ ಸರಿ. ಇದಲ್ಲದೆ ಆ ಧ್ಯಾನದಿಂದ ಮೋಕ್ಷವು ಸಾಧ್ಯವಾಗುವದೆಂದರೆ ಮೋಕ್ಷವು ಅನಿತ್ಯವಾಗಬೇಕು. ಎಂಬ ನಿನ್ನ ಆಕ್ಷೇಪಣೆಯೂ ಕೂಡ ಯುಕ್ತವಾಗುವದಿಲ್ಲ. ಯಾಕಂದರೆ ನಮ್ಮ ಶಿವಾದ್ವೈತ ಮತದಲ್ಲಿ ಸರ್ವ ಪ್ರಪಂಚವೂ ನಿತ್ಯ ವಾಗಿಯೇ ಇರುವದು. ಅಂದಮೇಲೆ ಮೋಕ್ಷವು ಅನಿತ್ಯವಾಗಬಹುದೇ ? ಅದೂಕೂಡ ನಿತ್ಯ ವಾದದ್ದೇ. ಹಾಗಾದರೆ ಎಲ್ಲೈ ಶಿವಾದ್ವೈತಿಯೇ ನಿಮ್ಮ ಮತದಲ್ಲಿ ಮೋಕ್ಷವು ನಿತ್ಯವಾಗಿದ್ದರೆ ಧ್ಯಾನಾದಿ ಉಪಾಯಗಳೇಕೆ? ಅಂದರೆ ಅದು ನಿತ್ಯವಾಗಿದ್ದರೂ ಅದಕ್ಕೆ ಆವರಕವಾದ ಸಂ ಕೋಚಕಲೆಯ ನಾಶಕ್ಕಾಗಿ ಧ್ಯಾನಾದಿ ಉಪಾಯಗಳು ಬೇಕು. ಶಿವಾದ್ವೈತಿಯೇ ನಿನ್ನ ಮತದಲ್ಲಿ ಅಜ್ಞಾನಾದಿ ಸಂಕೋಚವೂ ಕೂಡ ನಿತ್ಯ (ಸತ್ಯ) ವಾಗಿದೆಯಲ್ಲವೇ ? ಈ ಸತ್ಯ ವಾದ ಸಂಕೋಚದ ನಿವೃತ್ತಿರೂಪ ಪ್ರಯೋಜನವನ್ನಾದರೂ ಹೇಗೆ ಹೇಳುವಿ ? ಅಂದರೆ ಬ್ರಹ್ಮಾದ್ವೈತಿಯೇ ಸತ್ಯವಾದ ತಾಮ್ರದ ನಿವೃತ್ತಿಯು ಅದು ರಸಯೋಗದಿಂದ ಸುವರ್ಣವಾ ದಕಾಲದಲ್ಲಿ ಕಂಡುಬರುವಂತೆ, ಶಿವಯೋಗದಿಂದ ಜೀವನು ಶಿವನಾದಮೇಲೆ ಸತ್ಯವಾದ ಬಂಧದ ನಿವೃತ್ತಿಯನ್ನು ಒಪ್ಪಿಕೊಳ್ಳತಕ್ಕದ್ದು. ನಾನು ಹೇಳುವ ಕಾರ್ಯದ ನಿವೃತ್ತಿಯಂದರೆ ಕಾರಣ ರೂಪವಾಗಿ ಇರುವಿಕೆಯೆಂದು ಅರ್ಥ ಮಾಡಬೇಕು. ನಾಶವೆಂದು ತಿಳಿಯಕೂಡದು. ಅದುದ

ತಸ್ಯಾಜಡತ್ವಾತ್ ತದಯೋಗಾತ್ | ಅಸಂಗಸ್ಯ ಬ್ರಹ್ಮಣಸ್ತದಸಂಭವಾತ್ ಬಾಧ್ಯಬಾಧಕ ಭಾವಾಸಂಭವಶ್ಚಮುಕ್ತ್ಯತ ಬ್ರಹ್ಮಸೂತ್ರಶಾಂಕರ್ಯ್ಯಾಂದರ್ಶಿತ ಇತಿ ತಾದೃಶಾಶುದ್ಧಿಗ್ರಂಥಿಪ್ರವಿಲಯಾಯ ಧ್ಯಾನಂ ವಿಧೀಯತೆ ಶ್ರುತಿ ಸ್ಮೃತಿ ಪುರಾಣೇತಿಹಾಸಾದಿಷು ತಥಾಹಿ. ಅಥರ್ವಶಿಖಾಯಾಂ "ಶಿವಏಕೋಧ್ಯೇಯಃ ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ ಸಮಾಪ್ತಾಥರ್ವಣೀಶ್ರುತಿಃ" ಇತ್ಯಸ್ಯಾ ಉಪಬೃಂಹಣವಾಕ್ಯಂಚ ಸೂತಸಂಹಿತಾಯಾಂ ಯಜ್ಞವೈಭವಖಂಡೇಶ್ರೂಯತೆ ‖ ಅಥ ಮೋಕ್ಷಾರ್ಥಿಭಿಃ ಪ್ರಾಜ್ಞೈಃ ಶಿವಏವ ಶಿವಂಕರಃ | ಧ್ಯೇಯಃ ಸರ್ವಂಪರಿತ್ಯಜ್ಯ ಶಿವಾದನ್ಯತ್ತುದೈವತಂ ‖ ಅಸ್ಮಿನ್ನರ್ಥೆಶ್ರುತಿಃ ಸಾಧ್ವೀ ಸಮಾಪ್ತಾವೇದವಿತ್ತಮಾ ‖ ಇತಿ "ಸರ್ವಂಖಲ್ವಿದಂಬ್ರಹ್ಮ ತಜ್ಜಲಾನಿಶಾಂತಉಪಾಸೀತೇತಿ" ಇತಿ ಶ್ರುತಿರಪ್ಯುಪಾಸನಾಮುಪದಿಶತಿ | ತಸ್ಮಾಜ್ಜಾಯತ ಇತಿತಜ್ಜಂ ತಸ್ಮಿನ್

---

ರಿಂದ ದುಸ್ತರವಾದ ಸಂಸಾರ ಸಮುದ್ರದ ನಿಸ್ತರಣದಲ್ಲಿ ಸಮರ್ಥವಾದ ಧ್ಯಾನಾದಿ ಉಪಾಯವೇ ಮುಖ್ಯವಾದದ್ದೆಂದು ಸಿದ್ಧವಾದದ್ದರಿಂದ ಧ್ಯಾನದಿಂದ ಮುಕ್ತಿಯೆಂದು ಹೇಳುವಲ್ಲಿ ಯಾವ ಸಂಶಯವೂ ಇಲ್ಲವು.

ತತ್ವಮಸ್ಯಾದಿ ವಾಕ್ಯಜನ್ಯವಾದ ಜ್ಞಾನವು (ವೃತ್ತಿಯು) ನಿನ್ನ ಮತದಲ್ಲಿ ಜಡವಾಗಿರುವದರಿಂದ ಆ ವೃತ್ತಿಯು ಸರ್ವ ಹೃದಯದ ಅಜ್ಞಾನಾದಿ ಗ್ರಂಥಿಗಳನ್ನು ನಾಶಮಾಡಲಾರದು. ಆ ಗ್ರಂಥಿಗಳ ನಾಶವಾಗದಿದ್ದರೆ ಮುಕ್ತಿಯು ಸಂಭವಿಸಲಾರದು. ಯಾವಾಗ ಹೃದಯದ ಸರ್ವಗ್ರಂಥಿಗಳೂ ನಾಶವಾಗುವವೊ ಅದೇ ಕಾಲದಲ್ಲಿ ಮನುಷ್ಯನು ಅಮೃತನು (ಮುಕ್ತನಾಗುವನು) ಎಂದು ಶ್ರುತಿಯು ತಿಳಿಸಿರುತ್ತದೆ. ಹೃದಯದಲ್ಲಿರುವ ಅಜ್ಞಾನಾದಿ ಗ್ರಂಥಿಗಳನ್ನು ನಾಶಮಾಡಬೇಕಾದರೆ ವಿರೋಧಿಯೂ ಕೂಡ ಹೃದಯದಲ್ಲಿಯೇ ಇರಬೇಕು ಅಲ್ಲಿರದಿದ್ದರೆ ನಾಶವೇ ಆಗಲಾರದು. ಅದೇಕೆ "ಅಹಂಬ್ರಹ್ಮಾಸ್ಮಿ" ಎಂಬುವ ವೃತ್ತಿಯು ಹೃದಯದಲ್ಲಿಯೇ ಇರುವದು. ಅಜ್ಞಾನವು ಕೂಡಾ ಹೃದಯದಲ್ಲಿರುವದು. ಅಂದರೆ ಆ ವೃತ್ತಿಯು ಜಡವಾದದ್ದು ಆದುದರಿಂದ ಅಜ್ಞಾನದ ನಾಶಕ್ಕೆ ಅನುಕೂಲವಾಗಿ ಪ್ರಯತ್ನಪಡಲಾರದೆಂದು ಹೇಳಿಯೇ ಇದ್ದೇವೆ. ಇನ್ನು ಬ್ರಹ್ಮವೇ ಅದನ್ನು ನಾಶಮಾಡುತ್ತದೆಂದರೆ ಬ್ರಹ್ಮಕ್ಕೆ ಏನೂ ಬೇಕಿಲ್ಲವು. ಅದು ಕೇವಲ ಸಾಕ್ಷಿಯು (ಉದಾಶೀನವು) ಅಸಂಗವು ಇದಲ್ಲದೆ ವೃತ್ತಿಗೂ ಅಜ್ಞಾನಕ್ಕೂ ಬಾಧ್ಯಬಾಧಕಭಾವವು ಸಂಭವಿಸುವದಿಲ್ಲವೆಂದು ನಾವು ಬ್ರಹ್ಮಸೂತ್ರ ಶಾಂಕರೀವೃತ್ತಿಯಲ್ಲಿ ವಿಸ್ತಾರವಾಗಿ ಹೇಳಿದ್ದೇವೆ ಅಲ್ಲಿಯೇ ವಿಶೇಷ ಸಂಗತಿಯನ್ನು ತಿಳಿದುಕೊಳ್ಳಿರಿ. ಎಂದು ಶಾಂಕರೀಕಾರನು ಹೇಳಿರುವನು. ಆದುದರಿಂದ ಅಂಥ ಅಜ್ಞಾನಾದಿ ಅಶುದ್ಧಿಯ ನಾಶಕ್ಕಾಗಿ ಧ್ಯಾನವೇ ಉಪಾಯವೆಂದು ಶ್ರುತಿ ಸ್ಮೃತಿ ಇತಿಹಾಸ ಪುರಾಣ ಮೊದಲಾದ ಗ್ರಂಥಗಳಲ್ಲಿ ವಿಧಿಸಲ್ಪಡುತ್ತದೆ.

ಲೀಯತ ಇತಿ ತಲ್ಲಂ ತಸ್ಮಿನ್ನನಿತೀತಿತದನಂ | ತಜ್ಜಂಚ ತಲ್ಲಂಚ ತದನಂಚೇತಿ
ತಜ್ಜಲಾನಿ | ಅವಯುವಲೋಪಶ್ಛಾಂದಸಃ ಇತಿ ಶಬ್ದೋಹೇತ್ವರ್ಥಃ ಅರ್ಥಾ
ತ್ ಚಿದಚಿತ್ಪ್ರಪಂಚಾತ್ಮಕಂಬ್ರಹ್ಮ. ಸೃಷ್ಟಿಸ್ಥಿತಿಲಯಾಧಿಷ್ಠಾನತ್ವೇನೋಪಾಸಿ
ತವ್ಯಂ ಶಮಾನ್ವಿತೇನೇತಿ ವಿಧೀಯತೆ | ಕಠವಲ್ಲೀಷ್ವಪಿ ``ನಾಯಮಾತ್ಮಾಬಲ
ಹೀನೇನ ಲಭ್ಯೋನಮೇಧಯಾ ನಬಹುನಾಶ್ರುತೇನ ಯಮೈವೈಷವೃಣುತೆ
ತೇನ ಲಭ್ಯಸ್ತಸ್ಯೈಷ ಆತ್ಮಾವಿವೃಣುತೆ ತನೂಂಸ್ವಾಂ'' ಇತ್ಯುಕ್ತಂ'' ಯೋಗ
ಯಾಜ್ಞವಲ್ಕ್ಯಸ್ಮೃತೌ | ಅಥ ಧ್ಯಾನಂಪ್ರವಕ್ಷ್ಯಾಮಿ ಶೃಣುಗಾರ್ಗಿವರಾ
ನನೆ | ಧ್ಯಾನಮೇವಹಿಸರ್ವೇಷಾಂ ಕಾರಣಂ ಬಂಧಮೋಕ್ಷಯೋಃ || ಧ್ಯಾ
ನಂ ಶಿವಸ್ವರೂಪಸ್ಯ ವೇದನಂ ಮನಸಾಖಲು || ಕೃಷ್ಣಗೀತಾಯಾಂ. ಯುಂಜ
ನ್ನೇವಂ ಸದಾತ್ಮಾನಂ ಯೋಗೀನಿಯತಮಾನಸಃ | ಶಾಂತಿಂ ನಿರ್ವಾಣಪರ

---

ಧ್ಯಾನವೇ ಮೋಕ್ಷಕ್ಕೆ ಕಾರಣವೆಂದು ಅಥರ್ವಶಿಖೋಪನಿಷತ್ತು ವಿಧಿಸುತ್ತದೆ.ನಂದರೆ ಶಿವಾ
ತಿರಿಕ್ತ ವಿಷ್ಣ್ವಾದಿ ದೇವತೆಗಳನ್ನು ಬಿಟ್ಟು ಮೋಕ್ಷವೆಂಬ ಕಲ್ಯಾಣವನ್ನುಂಟುಮಾಡುವುದರಿಂದ
ಶಿವನೊಬ್ಬನೇ ಧ್ಯಾನಿಸಲ್ಪಡಲು ಯೋಗ್ಯನು. ಈ ವಿಷಯದಲ್ಲಿ ಶ್ರುತಿಯು ಸಮಾಪ್ತವಾಯಿತು.
ಎಲ್ಲಿ ? ಬ್ರಹ್ಮಾದ್ವೈತಿಯೇ ಧ್ಯಾನವು ಮುಕ್ತಿಗೆ ಸಾಕ್ಷಾತ್ಕಾರಣವಾಗಿದ್ದ ಪಕ್ಷದಲ್ಲಿ ``ಶಿ
ವಏಕೋಧ್ಯೇಯಃ'' ಎಂದು ಅಥರ್ವ ಶ್ರುತಿಯು ಧ್ಯಾನವು ಮುಕ್ತಿಗೆ ಕಾರಣವೆಂದು ಏಕೆ ವಿಧಾ
ನಮಾಡುತ್ತದೆ. ಈ ಶ್ರುತ್ಯರ್ಥವನ್ನು ಶ್ರೀ ವ್ಯಾಸರು ತಮ್ಮ ಸೂತ ಸಂಹಿತೆಯ ಯಜ್ಞವೈಭವ
ಖಂಡದಲ್ಲಿ ಹೇಳಿದ್ದಾರೆ ``ಅಥಮೋಕ್ಷಾರ್ಥಿಭಿಃ ಪ್ರಾಜ್ಞೈಃ ಶಿವ ಏವ ಶಿವಂಕರಃ'' ಎಂದು
ಮುಕ್ತಿಗೆ ಧ್ಯಾನವು ಮುಖ್ಯೋಪಾಯವೆಂಬ ತಮ್ಮ ಅಭಿಪ್ರಾಯವನ್ನು ಏಕೆ ಸ್ಪಷ್ಟಮಾಡಿದ್ದಾರೆ
ಇದಲ್ಲದೆ ``ಸರ್ವಂಖಲ್ವಿದಂಬ್ರಹ್ಮ ತಜ್ಜಲಾನಿ ಶಾಂತ ಉಪಾಸೀತೇತಿ'' ಸೃಷ್ಟಿಸ್ಥಿತಿಲಯಾದಿಗಳಿಗೆ
ಅಧಿಷ್ಠಾನವಾದ ಈ ಚರಾಚರ ಪ್ರಪಂಚರೂಪನಾದ ಪರಶಿವರೂಪವಾದ ಬ್ರಹ್ಮವನ್ನು ಉಪಾಸನೆ
ಮಾಡಬೇಕು. ಎಂದು ಹೇಳುವ ಶ್ರುತಿಯು ಮುಕ್ತಿಗೆ ಬ್ರಹ್ಮೋಪಾಸನೆಯೇ ಮುಖ್ಯಕಾರಣ
ವೆಂಬ ಅಭಿಪ್ರಾಯವನ್ನು ಕೊಡುತ್ತದೆ. ಮತ್ತು ಸರ್ವಾತ್ಮನಾದ ಶಿವನೇ ನಾನು ಎಂಬ ಚಿಚ್ಛಕ್ತಿ
ರೂಪವಾದ ಬಲವಿಲ್ಲದವನು ಬೇರೆ ಮೇಧಾದಿ ಉಪಾಯಗಳಿಂದ ಆ ಪರಮಾತ್ಮನನ್ನು ಹೊಂದ
ಲಾರನೆಂಬರ್ಥವುಳ್ಳ ``ನಾಯಮಾತ್ಮಾ ಬಲಹೀನೇನಲಭ್ಯಃ'' ಎಂಬ ಕಠವಲ್ಲೀ ಶ್ರುತಿಯು ಕೂಡಾ
ಮುಕ್ತಿಗೆ ಧ್ಯಾನವು ಮುಖ್ಯಕಾರಣವೆಂದು ತೋರಿಸುತ್ತದೆ ಎಲ್ಲಿ ಮಾಯಾವಾದಿಯೇ ಧ್ಯಾನವು
ಚಿತ್ತಶುದ್ಧಿಗೆ ಕಾರಣವು. ಮತ್ತು ಉಪನಿಷತ್ತುಗಳು ಉಪಾಸನೆಗೆ ವಿಧಾಯಕಗಳಲ್ಲವೆಂದರೆ
ಮೇಲೆ ಹೇಳಿದ ಅಥರ್ವ ಮೊದಲಾದ ಶ್ರುತಿಯು ಧ್ಯಾನವು ಮುಕ್ತಿಗೆ ಮುಖ್ಯಕಾರಣವೆಂದೂ
``ಧ್ಯೇಯಃ'' ``ಉಪಾಸೀತೇತಿ'' ಎಂಬ ವಿಧಿವಾಕ್ಯಗಳಿಂದ ಉಪನಿಷತ್ತುಗಳು ಉಪಾಸನಾವಿಧಾ
ಯಕಗಳೆಂದೂ ಏಕೆ ಹೇಳು[illegible] ದ ಜ್ಞಾನವೊಂದೇ ಮುಕ್ತಿಗೆ ಕಾರಣವು. ಧ್ಯಾನವಾ

ಮಾಂ ಮತ್ಸಂಸ್ಥಾಮಧಿಗಚ್ಛತೀತಿ ‖ ಕೌರ್ಮೇ ‖ ಧ್ಯಾನನಿಷ್ಠಸ್ಯಸತತಂ ನಶ್ಯತೇ ಸರ್ವಪಾತಕಂ | ತಸ್ಮಾನ್ಮಹೇಶ್ವರಂಜ್ಞಾತ್ವಾ ತದ್ಧ್ಯಾನಪರಮೋಭವೇತ್ ‖ ಇತಿ, ಈಶ್ವರಧ್ಯಾನನಿಷ್ಠಂ ಪ್ರತೀಶ್ವರೋಽನುಗೃಹ್ಣಾತೀತಿ ಪಾತಂಜಲದರ್ಶನೇಪ್ಯುಕ್ತಂ ''ಈಶ್ವರಪ್ರಣಿಧಾನಾದ್ವಾ'' ಇತೀದಮಸ್ಯಭಾಷ್ಯಂ ವೈಯ್ಯಾಸಿಕಂ ಪ್ರಣಿಧಾನಾದ್ಭಕ್ತಿ ವಿಶೇಷಾದಾವರ್ಜಿತ ಈಶ್ವರಸ್ತಮನುಗೃಹ್ಣಾತಿ ಅಭಿಧ್ಯಾನಮಾತ್ರೇಣ ತದಭಿಧ್ಯಾನಾದಪಿ | ಇತಿ, ಕೃಷ್ಣಗೀತಾಯಾಂ. ''ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ | ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ'' ತಮೇವಶರಣಂಗಚ್ಛ ಸರ್ವಭಾವೇನಭಾರತ | ಇತಿ, ಉಕ್ತಂಚದೀಕ್ಷಿತಚರಣೈರಪಿ. ''ಅಂತರ್ಗ್ರಂಥಿಪ್ರವಿಲಯಕೃತೇಚಿಂತ್ಯಸೇ ಯೋಗಿವೃಂದೈಃ'' ಇತಿ ಭಕ್ತಾನುಗ್ರಹಾರ್ಥಂ ಸ್ವೀಕೃತಲೀಲಾಮೂರ್ತಿಸದ್ಭಾ

---

ದರೂ ಚಿತ್ತಶುದ್ಧಿಗೆ ಉಪಯುಕ್ತವಾಗುತ್ತದೆನ್ನುವ ನಿನ್ನ ಪಕ್ಷವು ಶ್ರುತಿಗಳಿಗೆ ವಿರುದ್ಧವಾಯಿತು. ಇನ್ನು ಸ್ಮೃತಿಗಳಿಗೆ ವಿರುದ್ಧವಾಗುತ್ತದೆನ್ನುವದನ್ನು ಶಾಂಕರೀಕಾರನು ತೋರಿಸುತ್ತಾನೆ. ಹೇಗೆಂದರೆ-ಎಲೈ ಶ್ರೇಷ್ಠನಾದ ಮುಖವುಳ್ಳಗಾರ್ಗಿಯೇ ಇನ್ನು ಮೇಲೆ ಧ್ಯಾನದಸ್ವರೂಪವೇನು? ಅದರಿಂದೇನು ಪ್ರಯೋಜನವು ಎಂಬುವ ವಿಷಯವನ್ನು ಹೇಳುತ್ತೇನೆ. ಕೇಳು? ಶಿವಸ್ವರೂಪದ ಚಿಂತನೆಯೇ ಧ್ಯಾನವು. ಈ ಧ್ಯಾನವು ಮೋಕ್ಷಕ್ಕೆ ಕಾರಣವು ಇನ್ನು ಸ್ರಕ್ಚಂದನವನಿತಾ ಮೊದಲಾದ ವಿಷಯಗಳ ಧ್ಯಾನವು (ಆಲೋಚನೆಯು) ಬಂಧಕ್ಕೆ ಕಾರಣವು. ''ವಿಷಿಣ್ವಂತಿ ಪುರುಷಮನುಬಧ್ನಂತೀತಿ ವಿಷಯಾಃ'' (ಪುರುಷನನ್ನು ಮೇಲಕ್ಕೇಳದ ಹಾಗೆ ಕಟ್ಟಿಹಾಕಿ ಬಿಡತಕ್ಕವುಗಳೆಂದು ವಿಷಯಶಬ್ದದ ಅರ್ಥವು ಇಂಥ ವಿಷಯಗಳಲ್ಲಿ ಧ್ಯಾನಮಾಡಿದರೆ ಅವು ಪುರುಷನನ್ನು ಬಂಧಿಸಿಬಿಡುತ್ತವೆ. ನಿತ್ಯ ಮೋಕ್ಷಸುಖವನ್ನು ಕೊಡತಕ್ಕ ಶಿವನನ್ನು ಧ್ಯಾನಿಸಿದರೆ ಅವನು ಅನುಗ್ರಹಿಸಿ ಮೋಕ್ಷಸುಖವನ್ನು ಕೊಡುವನು. ಆದ್ದರಿಂದ ಧ್ಯಾನವೇ ಬಂಧಮೋಕ್ಷಗಳಿಗೆ ಕಾರಣವೆಂದು ಯೋಗ ಯಾಜ್ಞವಲ್ಕ್ಯಸ್ಮೃತಿಯು ಹೇಳುತ್ತದೆ ಇದೇ ಅರ್ಥವನ್ನೇ ''ಮನಏವ ಮನುಷ್ಯಾಣಾಂಕಾರಣಂ ಬಂಧಮೋಕ್ಷಯೋಃ | ಬಂಧಾಯ ವಿಷಯಾಸಕ್ತಂ ಮುಕ್ತ್ಯೈ ನಿರ್ವಿಷಯಂ ಸ್ಮೃತಂ ‖ ಎಂಬುವ ಶ್ರುತಿಯೂ ಹೇಳುತ್ತದೆ. ಇದಲ್ಲದೆ ''ಯುಂಜನ್ನೇವಂ'' ಎಂಬುವ ಭಗವದ್ಗೀತೆಯೂ ಕೂಡಾ ಮುಕ್ತಿಗೆ ಧ್ಯಾನಯೋಗವೇ ಮುಖ್ಯಕಾರಣವೆಂದೂ ಉದ್ಘೋಷಿಸುತ್ತದೆ. ಆದ್ದರಿಂದ ಬ್ರಹ್ಮಾದ್ವೈತಿಯೇ? ಜ್ಞಾನವಂದೇ ಮುಕ್ತಿಗೆ ಕಾರಣವು ಧ್ಯಾನವು ಮುಕ್ತಿಗೆ ಕಾರಣವಲ್ಲವುಎಂಬ ನಿನ್ನ ಪಕ್ಷವು ಮೇಲಣ ಸ್ಮೃತಿಗಳಿಗೆ ವಿರುದ್ಧವಾಯಿತು. ಇನ್ನು ಧ್ಯಾನಯೋಗ ನಿಷ್ಠನಾದವನ ಸರ್ವಪಾತಕಗಳು ನಷ್ಟವಾಗುವವು ಆದುದರಿಂದ ಮಹೇಶ್ವರನನ್ನು ತಿಳಿದು ಅವನ ಧ್ಯಾನದಲ್ಲಿ ಆಸಕ್ತನಾಗಬೇಕು. ಎಂಬ ಅರ್ಥವುಳ್ಳ ಕೂರ್ಮ ಪುರಾಣವೂ ಕೂಡ ಧ್ಯಾನವು ಮುಕ್ತಿಗೆ ಕಾರಣವೆಂಬಭಿಪ್ರಾಯವನ್ನು ಕೊಡುತ್ತದೆ. ಇದು ಅಲ್ಲದೆ ಈಶ್ವರಧ್ಯಾನಯೋಗದಲ್ಲಿ ನಿಷ್ಠನಾ

ವಃ ಶಾಸ್ತ್ರಪ್ರಸಿದ್ಧಏವ | ತಥಾಪಿ ಮಾನವಾ ಮೂರ್ಖಾಃ, ಕೇಚಿತ್ ತಸ್ಯ ಪರ ಬ್ರಹ್ಮಣಃ ಶಿವಸ್ಯ ಮೂರ್ತೇರಸತ್ಯತ್ವಂ ವದಂತೀತಿಯತ್ತತ್ರ ಗುರುಕಾರುಣ್ಯಾ ಭಾವಏವ ಕಾರಣಮಿತಿ ಸ್ಪಷ್ಟಂ | ಉಕ್ತಂಚ ಬ್ರಹ್ಮಾಸಂದೇನ „ಬಹುಶಾಸ್ತ್ರ ಮಧೀತ್ಯಾಪಿ ಗುರುಕಾರುಣ್ಯವರ್ಜಿತಾಃ ಶಿವಸ್ಯ ಮೂರ್ತಿವಾರ್ತಾಮಪ್ಯ ಹೋಜಾನಂತಿಸೈವಹಿ || ಇತಿ, ಪರಾಶರಶ್ಚ || ಜ್ಞಾನಾವಲಂಬನಭ್ರಾಂತ್ಯಾ ಮನುಷ್ಯಾ ಮಂದಬುದ್ಧಯಃ | ಮೂರ್ತ್ಯುಪೇಕ್ಷಾಂ ಪ್ರಕುರ್ವಂತಿ ಜ್ಞಾನಂತೇ ಷಾಂನಜಾಯತೆ || ಇತ್ಯುಕ್ತವಾನ್. ಉಕ್ತಂಚಾದಿತ್ಯಪುರಾಣೆ. ಇಂದ್ರಂ ಪ್ರತಿ ಬೃಹಸ್ಪತಿಃ || ಅಸ್ತ್ಯನಂತಗುಣಾವಾಸಃ ಪರಾನಂದೈಕವಿಗ್ರಹಃ | ಧ್ಯಾತಃ ಕೈವಲ್ಯದಃ ಪುಂಸಾಂ ಮಹಾದೇವೋನಚಾಪರಃ || ಕರ್ಮಪಾಶನಿಬದ್ಧಾನಾಂ ಮಹಾಮೋಹಾತ್ಮನಾಂಹರೆ | ಸ್ಮರಣಾನ್ಮೋಚಕಸ್ತೇಷಾಮುಮಾಪತಿರಿತಿಶ್ರು

---

ಧವನಿಗೆ ಈಶ್ವರನು ಅನುಗ್ರಹಿಸುತ್ತಾನೆಂದು “ಈಶ್ವರ ಪ್ರಣಿಧಾನಾದ್ವಾ” ಎಂಬುವ ಸೂತ್ರದಿಂದ ಪಾತಂಜಲ ದರ್ಶನದಲ್ಲಿ ಹೇಳಿದೆ. ಈ ಸೂತ್ರಕ್ಕೆ ಇರುವ ವ್ಯಾಸಭಾಷ್ಯದ ತಾತ್ಪರ್ಯವೇನಂದ ರೆ-ಪ್ರಣಿಧಾನವೆಂದರೆ-ಭಕ್ತಿವಿಶೇಷವು ಇದರಿಂದ ಪರಿಪಕ್ವ ಚಿತ್ತನಾದ ಪುರುಷನನ್ನು ಈಶ್ವರನು ಪ್ರಸನ್ನನಾಗಿ ಅನುಗ್ರಹಿಸುತ್ತಾನೆಂದು ಇರುತ್ತದೆ. ಈ ಪರಮೇಶ್ವರನ ಅನುಗ್ರಹವೇ ಮೋಕ್ಷ ವು. ಇದು ಭಕ್ತಿವಿಶೇಷದಿಂದ ಪ್ರಾಪ್ತವಾಗುತ್ತದೆನ್ನುವದರಿಂದ ಮುಕ್ತಿಗೆ ಭಕ್ತಿಯೋಗವೆ (ಧ್ಯಾ ನಸ್ವರೂಪವಾದ ಭಕ್ತಿಯೇ) ಉಪಾಯವೆಂದು ಹೇಳಿದಂತಾಯಿತು. ಮತ್ತು ಎಲೈ ಅರ್ಜುನ? ಯಾವ ಈಶ್ವರನು ಸಮಸ್ತ ಪ್ರಾಣಿಗಳ ಹೃದಯದಲ್ಲಿದ್ದುಕೊಂಡು ತನ್ನ ಮಾಯೆಯಿಂದ ಶರೀರ ವೆಂಬ ಯಂತ್ರವನ್ನು ಹತ್ತಿದ ನಿಖಿಲ ಪ್ರಾಣಿಗಳನ್ನು ಆಯಾಯ ಕರ್ಮಗಳಲ್ಲಿ ಪ್ರೇರಿಸುವನೊ? ಆ ಈಶ್ವರನಿಗೇನೇ (ಪ್ರಾಣಲಿಂಗಕ್ಕೆ) ಶರಣಾಗತನಾಗು. ಅವನೊಬ್ಬನಲ್ಲದೇ ಮತ್ತಾರೂ ಮೋಕ್ಷಸುಖವನ್ನು ಕೊಡಲಾರರು. ಆದುದರಿಂದ ಸರ್ವಪ್ರಕಾರದಿಂದಲೂ ಅವನಿಗೇನೇ ಶರಣಾ ಗತನಾಗು ಎಂಬುವದರಿಂದ ಕೃಷ್ಣನು ಅಂತರ್ಲಿಂಗಾನುಸಂಧಾನವೆ ಮುಕ್ತಿಗೆ ಕಾರಣವೆಂದು ಅಭಿಪ್ರಾಯಕೊಟ್ಟಿರುವನೆಂದು ಭಗವದ್ಗೀತೆಯಲ್ಲಿ ತಿಳಿದುಬರುತ್ತದೆ.

ಎಲೈ? ಬ್ರಹ್ಮಾದ್ವೈತಿಯೇ? ಅಪ್ಪಯ್ಯದೀಕ್ಷಿತರೂ ಕೂಡಾ ಎಲೈ ಪರಶಿವನೆ ಒಳಗಿರುವ ಅಜ್ಞಾನಾದಿ ಗ್ರಂಥಿಗಳ ವಿಲಯಕ್ಕೋಸ್ಕರ ಯೋಗಿಗಳ ಸಮೂಹಗಳಿಂದ ಚಿಂತಿಸಲ್ಪಡುತ್ತಿರುವಿ ಯೆಂದು ತಮ್ಮ ಆತ್ಮಾರ್ಪಣ ಸ್ತುತಿಯೆಂಬ ಗ್ರಂಥದಲ್ಲಿ ಹೇಳಿರುವದು. ಬ್ರಹ್ಮಾತ್ಮೈಕ್ಯಸಾ ಕ್ಷಾತ್ಕಾರವೇ ಹೃದಯಗ್ರಂಥಿಯ ನಾಶಕ್ಕೆ ಕಾರಣವೆಂದರೆ ನಿನ್ನ ಪಕ್ಷಕ್ಕೆ ಅಪ್ಪಯ್ಯದೀಕ್ಷಿತರ ತಾತ್ಪರ್ಯವಿಲ್ಲವೆಂದು ಸ್ಪಷ್ಟನಾಯಿತು. ಇನ್ನು ಅನೇಕ ಉಪನಿಷತ್ತುಗಳಲ್ಲಿದ್ದ ಹರವಿದ್ಯಾವಿ ಧಿಯು ಹೇಳಲ್ಪಡುತ್ತಿರಲು ಪರಶಿವನಿಗೆ ಪರಿಚ್ಛಿನ್ನಮೂರ್ತಿಯು ಇಲ್ಲವು ಅವನ ಧ್ಯಾನವು ಸಂಭ ವಿಸುವದಿಲ್ಲವೆನ್ನುವ ನಿನ್ನ ಪಕ್ಷವು ಅಸಂಗತವಾದದ್ದು. ಪರಶಿವನ ಲೀಲಾಮೂರ್ತಿಯು ಇರುವ

ತಿಃ || ಇತಿ ಯದುಕ್ತಂ ಪರಬ್ರಹ್ಮಣಃ ಶಿವಸ್ಯ ನಿಷ್ಕಲಸ್ಯ ಪೂರ್ವಾನುಭವಾಭಾ ವಾತ್ ನ ತದ್ಧ್ಯಾನಂ ಸ್ಮೃತಿರೂಪಂ ಸಂಭವತೀತಿ ತದಪಿಬಾಲಿಶಭಾಷಿತಂ | ಅನ ನುಭೂತಸ್ಯಾಪಿ ಪದಾರ್ಥಸ್ಯ ಸ್ಮೃತಿರೂಪಚಿಂತಾಯಾ ದೃಶ್ಯಮಾನತ್ವಾತ್ | ಕಾಶೀಂ ಜಿಗಮಿಷುರಾಪ್ತವಾಕ್ಯಂ ಚೋರೋಪದ್ರವಮಾರ್ಗಾದನುಕೂಲಾಧ್ವ ಗಾಮಾಚಿಂತಯನ್ ಗಂಗಾಸ್ನಾನಾನಂದಮನುಭೂಯಚ. ಆನಂದಸಮರಸೋ ಭವತೀತಿಶ್ರುತ್ವಾ ನಿರುಪದ್ರವಮಾರ್ಗಮಾಲಂಬ್ಯ ಸನ್ನಿಹಿತ ಕಾಶೀದೇಶಃ ಸ್ಮೃ ತ್ವಾಚಾಪ್ತವಾಕ್ಯೇನ ಗಂಗಾಸ್ನಾನಾನಂದಮನುಭೂಯಚಾನಂದಪರವಶೋ ಭವತಿ ಯಥಾತಥಾ ಪರಮಾಪ್ತವಾಕ್ಯ ಶ್ರುತಿನಿಕರೇಣಾಧ್ವನಾ ಗುರುಮುಖಾಂ ಬೋಧಿ ನಿರ್ಗತೇನ ಗಚ್ಛನ್ ನಿಶ್ಚಿತಹಿತಾನುಕೂಲವ್ಯಾಪಾರಃ ಧ್ಯಾಯಂಶ್ಚ ಸ್ವಸ್ವರೂಪಂ ಸಚ್ಚಿದಾನಂದಂ ಪರಶಿವಂ ಧ್ಯಾನಧ್ರೌವ್ಯೇಚಾಮೃತೀಭವತೀತಿ

---

ದೆಂಬ ವಿಷಯವು ಶಾಸ್ತ್ರ ಪ್ರಸಿದ್ಧವಾದದ್ದೇ ಆಗಿದೆ. ಆದರೂ ಕೆಲವರು ಶಿವನಿಗೆ ಮೂರ್ತಿ ಇಲ್ಲ ವೆನ್ನುವರು ಹೀಗೆ ಅವರು ಅನ್ನುವದು ಗುರುಕಾರುಣ್ಯವಿಲ್ಲದಿರುವದರಿಂದೆಂದು ಸ್ಪಷ್ಟವಾಗುತ್ತ ದೆ. ಬ್ರಹ್ಮಾನಂದರೂ ಕೂಡಾ ಬಹಳ ಶಾಸ್ತ್ರಗಳನ್ನು ಓದಿ ಗುರುಕಾರುಣ್ಯವಿಲ್ಲದಿರುವ ಮಂ ದಬುದ್ಧಿಗಳು ಶಿವನ ಮೂರ್ತಿಯ ವಾರ್ತೆಯನ್ನುಕೂಡಾ ತಿಳಿಯುವದಿಲ್ಲವೆನ್ನುವದು ಆಶ್ಚರ್ಯದ ಸಂಗತಿಯೇ ಸರಿ ಎಂದು ಹೇಳಿರುವರು. ಇದು ಅಲ್ಲದೆ ಶ್ರೀ ಪರಾಶರರೂ ಕೂಡಾ ಜ್ಞಾನವೊಂ ದರಿಂದಲೇ ಮುಕ್ತಿಯುಂಟಾಗುವದರಿಂದ ಜ್ಞಾನವನ್ನೇ ಅವಲಂಬಿಸಬೇಕೆಂಬುವ ಭ್ರಾಂತಿಯಿಂ ದಮೂರ್ತಿಯನ್ನು ಸ್ವೀಕರಿಸದೆ ಉಪೇಕ್ಷೆಯನ್ನು ಮಾಡುವರು ಹೀಗೆ ಶಿವನ ಮೂರ್ತಿಯನ್ನು ಉಪೇಕ್ಷಿಸುವ ಮಂದಬುದ್ಧಿಗಳಿಗೆ ಜ್ಞಾನವೇ ಉಂಟಾಗುವದಿಲ್ಲವು ಎಂದು ಹೇಳಿರುವರು ಇದು ಅಲ್ಲದೆ ಆದಿತ್ಯ ಪುರಾಣದಲ್ಲಿ ಇಂದ್ರನನ್ನು ಕುರಿತು ಬೃಹಸ್ಪತಿಯು ಅನಂತಕಲ್ಯಾಣ ಗುಣಾ ವಾಸನೂ ಪರಾನಂದವೇ ಮುಖ್ಯವಾದ ಶರೀರವುಳ್ಳವನೂ ಆದ ಮಹಾದೇವನೊಬ್ಬನೇ ತನ್ನ ನ್ನು ಧ್ಯಾನಿಸಿದವರಿಗೆ ಕೈವಲ್ಯವನ್ನು ಕೊಡುವನಲ್ಲದೆ ಮತ್ತೊಬ್ಬನು ಕೊಡಲಾರನು ಎಂದೂ ಎಲೈ ಇಂದ್ರನೇ ಕರ್ಮಪಾಶಬದ್ಧರಾಗಿಯೂ ಮಹಾ ಮೋಹಿಗಳಾಗಿಯೂ ಇರುವ ಜನಗಳು ಶಿವಸ್ಮರಣೆಯನ್ನು ಮಾಡಲು ಆ ಉಮಾಪತಿಯಾದ ಶಿವನು ತನ್ನನ್ನು ಸ್ಮರಿಸುವ ಜನಗಳ ಪಾಶಗ ಳನ್ನು ಕತ್ತರಿಸಿಹಾಕಿ ಅವರಿಗೆ ಶಾಶ್ವತವಾದ ಮೋಕ್ಷಸುಖವನ್ನು ಕೊಡುವನೆಂದೂ ಹೇಳಿದ್ದಾ ನೆ ಆದ್ದರಿಂದ ನಿನ್ನ ಪಕ್ಷವು ಪುರಾಣಕ್ಕೂ ವಿರುದ್ಧವಾಯಿತು. ಎಲೈ ಶಿವಾದ್ವೈತಿಯಾದ ವೀರ ಶೈವನೇ ! ನಿಷ್ಕಲವಾದ ಪರಶಿವಬ್ರಹ್ಮಕ್ಕೆ ಪೂರ್ವಾನುಭವವಿಲ್ಲದಿರುವದರಿಂದ ಸ್ಮೃತಿರೂಪವಾದ ಅವರ ಧ್ಯಾನವೇ ಸಂಭವಿಸುವದಿಲ್ಲವು ಇದಕ್ಕೆ ನಿನ್ನ ಸಮಾಧಾನವೇನು ಎಂಬುವ ಪ್ರಶ್ನವ ನ್ನು ಮೂರ್ಖನೂಕೂಡಾ ಮಾಡಲಾರನು. ಯಾಕಂದರೆ ಪೂರ್ವದಲ್ಲಿ ಅನುಭೂತವಾಗಿರುವ ಪದಾರ್ಥಕ್ಕಾದರೂ ಸ್ಮೃತಿಯು ಸಂಭವಿಸುತ್ತದೆ. ಹೇಗಂದರೆ ಒಬ್ಬಾನೊಬ್ಬ ಮನುಷ್ಯನು

ಕೇಚಿತ್ | ವಸ್ತುತಸ್ತು ಸಚ್ಚಿದಾನಂದಾದ್ವಿತೀಯ ಸರ್ವಜ್ಞ ಸರ್ವಾತ್ಮಕೋಹ ಮಿತ್ಯಾಕಾರಕಾನುಭವರೂಪ ಪರಾಹಂತಾಮಯ ಚಿಚ್ಛಕ್ತೇಃ ಶಿವಾವಸ್ಥಾಯಾಂ ಸತ್ವಾತ್ | ಪೂರ್ವಾನುಭೂತಸ್ಯೈವ ಸ್ವಸ್ವರೂಪ ಸಚ್ಚಿದಾನಂದಾತ್ಮಕ ಸರ್ವಜ್ಞತ್ವಾದಿ ವಿಶಿಷ್ಟಸ್ಯ ಗುರುಶಾಸ್ತ್ರಾದ್ಯುದ್ಬೋಧಕವಶಾತ್ ಸ್ವರೂಪಂ ಶಿವಂ ಸ್ಮೃತ್ವಾ ಸ್ಮೃತಿದಾರ್ಢ್ಯೇನ ಸ್ವಕೀಯಂ ಶಿವರೂಪಂ ಸಾಕ್ಷಾತ್ಕರೋತಿ | ಯಥಾಜಾಗ್ರತಿ ಧನಧಾನ್ಯಾದಿ ಸ್ವಸಾಮರ್ಥ್ಯಮನುಭೂಯ ಸುಪ್ತಸ್ತದ್ವಿಸ್ಮೃತ್ಯ. ಪ್ರತಿಬೋಧಾವಸ್ಥಾಭಿಮುಖಃ ಸನ್ ಮಂದಂಮಂದಂ ತತ್ ಸ್ಮೃತ್ವಾ ಪ್ರತಿಬುದ್ಧಃ ಸಾಕ್ಷಾತ್ಕರೋತಿ. ತಥೈವ ಶಿವಾವಸ್ಥಾಯಾಂ ಸಚ್ಚಿದಾನಂದ ಸರ್ವಜ್ಞತ್ವಾದಿ ಸ್ವಶಕ್ತಿಮನುಭೂಯ, ಸ್ವಸ್ವಾತಂತ್ರ್ಯತಃ ತದಪಿಜ್ಞಾನಸುಪ್ತಿದಶಾಪನ್ನಃ | ಪ್ರತಿಬುದ್ಧಶ್ಚ ಸ್ವಾತ್ಮೀಯಂ ಸರ್ವಂ ಪ್ರತ್ಯಕ್ಷೀಕೃತ್ಯ ಅಮೃತೀಭವತಿ.

---

ಎಂದೆಂದೂ ಕಾಶಿಗೆ ಹೋಗಿರುವುದಿಲ್ಲವು. ಅಲ್ಲಿ ಗಂಗಾಸ್ನಾನಾನಂದವನ್ನು ಅನುಭವಿಸಿಯೂ ಇರುವುದಿಲ್ಲವು. ಇಂತವನಿಗೆ ಚೋರರ ಉಪದ್ರವವಿರುವ ಮಾರ್ಗವನ್ನು ಬಿಟ್ಟು, ಅನುಕೂಲಮಾರ್ಗವನ್ನವಲಂಬಿಸಿ ಹೋಗುತ್ತ, ಅಲ್ಲಿ ಗಂಗಾಸ್ನಾನದ ಆನಂದವನ್ನು ಚಿಂತಿಸುತ್ತ ಗಂಗಾಸ್ನಾನಾನಂದವನ್ನು ಅನುಭವಿಸಿ, ಆನಂದಪರವಶನಾಗುವನೆಂಬುದಾಗಿ ಮತ್ತೊಬ್ಬ ಆಪ್ತನು ಹೇಳಲು, ಅದನ್ನು ಕೇಳಿ ಆತನು ಕಳ್ಳದಾರಿಯನ್ನು ಬಿಟ್ಟು ಅನುಕೂಲ ಮಾರ್ಗದಿಂದ ಹೋಗುತ್ತ ಮನಸ್ಸಿನಲ್ಲಿ ಗಂಗಾಸ್ನಾನದಿಂದಾಗುವ ಆನಂದವನ್ನು ಚಿಂತಿಸುತ್ತಿರಲು, ಅವನಿಗೆ ಆನಂದಸಮರಸಭಾವವು ಹೇಗೆ ಉಂಟಾಗುತ್ತದೆಯೋ ಅದರಂತೆ ಪರಮಾಪ್ತನಾದ ಶಿವನ ಶ್ರುತಿವಾಕ್ಯಗಳು ಗುರುಮುಖವೆಂಬ ಸಮುದ್ರದಿಂದ ಹೊರಡಲು ಆ ವಾಕ್ಯಗಳೆಂಬ ಮಾರ್ಗದಿಂದ ಹೋಗುತ್ತ ತನ್ನವ್ಯಾಪಾರವು ಹಿತವಾದದ್ದೆಂದು ನಿಶ್ಚಯಿಸಿ, ಸ್ವಸ್ವರೂಪವಾದ ಸಚ್ಚಿದಾನಂದರೂಪವಾದ ಪರಶಿವಬ್ರಹ್ಮವನ್ನು ಚಿಂತಿಸುತ್ತ, ಆನಂದಪರವಶನಾಗಿ ಅಮೃತನಾಗುವನು. ಎಲೈ ಬ್ರಹ್ಮಾದ್ವೈತಿಯೇ! ಎಂದೆಂದೂ ಗಂಗಾಸ್ನಾನಾನಂದವನ್ನು ಅನುಭವಿಸದೆ ಇದ್ದು ಅದನ್ನು ಚಿಂತಿಸುವದು ಪ್ರತ್ಯಕ್ಷಸಿದ್ಧವಾದ ಮಾತು. ಹೀಗಿದ್ದು ಅನನುಭೂತವಾದ ಪದಾರ್ಥಕ್ಕೆ ಸ್ಮೃತಿರೂಪವಾದ ಚಿಂತನೆಯು ಸಂಭವಿಸುವದಿಲ್ಲವೆನ್ನುವದು ಮೂರ್ಖತನವಲ್ಲವೆ! ಎಂದು ಕ್ರಿಯಾಸಾರಕಾರರ ಅಭಿಪ್ರಾಯವನ್ನು ಕೇಚಿತ್ತು ಎಂಬುವದರಿಂದ ತೋರಿಸಿ ಶಾಂಕರೀಕಾರನು ತನ್ನ ಅಭಿಪ್ರಾಯವನ್ನು ವಸ್ತುತಸ್ತು (ವಾಸ್ತವಿಕವಾಗಿ) ಎಂಬುವದರಿಂದ ತೋರಿಸುತ್ತಾನೆ. ಹೇಗೆಂದರೆ ನಾನು ಸರ್ವಪ್ರಪಂಚರೂಪನು ನಾನು ಸರ್ವಜ್ಞನು ಎಂಬುವ ಅನುಭವವು ಪೂರ್ವದಲ್ಲಿ (ಶಿವಾವಸ್ಥೆಯಲ್ಲಿ) ಇತ್ತು. ಇಂಥ ಅನುಭವಕ್ಕೆ ವಿಷಯವಾದ ಸಚ್ಚಿದಾನಂದಾದ್ವಿತೀಯವಾದ ತನ್ನ ಶಿವಸ್ವರೂಪವನ್ನು ಗುರುಮುಖದಿಂದ ಹೊರಟ "ತತ್ವಮಸಿ" ಮೊದಲಾದ ಶಾಸ್ತ್ರವೆಂಬ ಉದ್ಬೋಧಕವಶದಿಂದ ಸ್ಮರಿಸುತ್ತಾ ಹೋಗಲಾಗಿ ಸ್ಮೃತಿಯು ದೃಢವಾಗಲು ತನ್ನ ಶಿವರೂಪವನ್ನು ತಾನೇ ಪ್ರತ್ಯಕ್ಷವಾಗಿ ನೋಡುವನು. ಹೇಗೆಂದರೆ– ಜಾಗ್ರತ್ಕಾಲದಲ್ಲಿ ಪುರುಷನು ತನ್ನ ಧನ

ಅಘಟಿತ ಘಟನಾಪಟೋರಗಸ್ತ್ಯಸ್ಯ ಸಮುದ್ರಪಾನಶಕ್ತಿವತ್ ಅಚಿಂತ್ಯಾನಂತಶ
ಕ್ತಿಕಸ್ಯ ಪರಶಿವಸ್ಯ ಅನುಗ್ರಹವಶಾದೇವಮುಕ್ತೋಽಭವತಿ | ತಥಾಚ ಪ್ರತಿಬೋ
ಧೇನ ವಿಷಯೀಕೃತಂ ಯದಾಬ್ರಹ್ಮ ತದೈವಮತಂ ಸಮ್ಯಗ್ದೃಷ್ಟಂ ನಾನ್ಯೇ
ನೋಪಾಯೇನೇತ್ಯತ್ರ ಹಿ ಶಬ್ದಃ ತದಾಯಂ ಪ್ರತಿಬುದ್ಧಃ | ಅಮೃತತ್ವಂವಿಂ
ದತಿ ತಾದೃಶಪ್ರತಿಬೋಧರೂಪವೀರ್ಯಂಚ ಶುದ್ಧೇನಾತ್ಮನಾತ್ಮನಾವಿಂದತಿ.
ತಾದೃಶವೀರ್ಯರೂಪಯಾವಿದ್ಯಯಾ ಅಮೃತಂ ನಿರ್ವಾಣಪದಂ ವಿಂದತೆ ದ್ವಿರು
ಕ್ತಿಸ್ತು ಪ್ರತಿಬೋಧಾಭಾವೇನಾಮೃತತ್ವಪ್ರಾಪ್ತಿಃ ಪ್ರತಿಬೋಧೇನೈವೇತ್ಯುಪದೇ
ಶಾರ್ಥಾ, ಇತಿ ಮಂತ್ರಾರ್ಥಸಾಂಗತ್ಯಂ ದ್ರಷ್ಟವ್ಯಂ ವಿದ್ವದ್ಭಿರಿತಿ || ಕಿಮಸ್ತಿ
ಬಹುನೋಕ್ತೇನ ಮಾನುಷಂ ಜನ್ಮದುರ್ಲಭಂ || ತತ್ರಾಪಿ ದುರ್ಲಭಂ ಜನ್ಮಕುಲೆ

---

ಧ್ಯಾನ್ಯಾದಿ ಸಾಮರ್ಥ್ಯವನ್ನು ಮರೆತು ಪುನಃ ಎಚ್ಚರಿಕೆಯನ್ನು ಹೊಂದುವ ಸಮಯದಲ್ಲಿ
ಮೆಲ್ಲಮೆಲ್ಲನೆ ತನ್ನ ಎಲ್ಲಾ ಸಾಮರ್ಥ್ಯವನ್ನು ಸ್ಮರಣೆಮಾಡುತ್ತ ಸಂಪೂರ್ಣ ಜಾಗ್ರತನಾಗಿ,
ತನ್ನ ಸಾಮರ್ಥ್ಯವನ್ನು ಪ್ರತ್ಯಕ್ಷವಾಗಿ ನೋಡಿ ಆನಂದವುಳ್ಳವನಾಗುವನು. ಅದರಂತೆ ಶಿವಾ
ವಸ್ಥೆಯಲ್ಲಿ ತನ್ನ ಸಚ್ಚಿದಾನಂದ ಸರ್ವಜ್ಞತ್ವಾದಿ ಸಾಮರ್ಥ್ಯವನ್ನು ಪ್ರತ್ಯಕ್ಷವಾಗಿ ಅನುಭ
ವಿಸಿ, ತನ್ನ ಲೀಲಾಸ್ವಾತಂತ್ರ್ಯದಿಂದ ಆ ಸಾಮರ್ಥ್ಯದ ಮರವೆ ಎಂಬ ಸುಪ್ತಿಯನ್ನು ಹೊಂದಿ
ಶ್ರೀಗುರುವಿನಲ್ಲಿ ಶರಣಾಗತನಾಗಿ ದೀಕ್ಷೆಯನ್ನು ಹೊಂದಿ ಆ ದೀಕ್ಷಾಕಾಲದಲ್ಲಿ ಶ್ರೀಗುರು
ವಿನ ಉಪದೇಶದಿಂದ ತನ್ನ ಸಾಮರ್ಥ್ಯವನ್ನು ಮೆಲ್ಲಮೆಲ್ಲನೆ ಸ್ಮರಿಸುತ್ತಾ, ಆ ಸಾಕ್ಷಾತ್ಕಾರ
ರೂಪವಾದ ಚಿಚ್ಛಕ್ತಿ ಎಂಬ ಪ್ರತಿಬೋಧಾವಸ್ಥೆಯನ್ನು ಹೊಂದಿ ಅಮೃತನಾಗುವನು. ನಿಷ್ಕ
ಲನೂ ನಿರೂಪನೂ ನಿರವಯವನೂ ಅಚಿಂತ್ಯರೂಪನೂ ಅನಂತಶಕ್ತಿಯುಳ್ಳವನೂ ಆಗಿದ್ದರೂ
ಕೂಡಾ ಪರಶಿವನು ತನ್ನನ್ನು ಧ್ಯಾನಿಸುವವರಿಗೆ ಅನುಗ್ರಹ ಮಾಡುವನು. ಈ ಅನುಗ್ರಹ ಮಾ
ತ್ರದಿಂದಲೇ ಸ್ವಸ್ವರೂಪ ಶಿವಸಾಕ್ಷಾತ್ಕಾರವಾಗುವದು. ಶಿವಾನುಗ್ರಹ ಮಾತ್ರದಿಂದಲೇ ಅಗ
ಸ್ತ್ಯನು ಅಘಟಿತ ಘಟನಾಸಾಮರ್ಥ್ಯವುಳ್ಳವನಾಗಿ ವಿಶಾಲವಾದ ವಿಪುಲವಾದ ಸಮುದ್ರವನ್ನೇ
ಪಾನಮಾಡಿದನು. ಅಂದಮೇಲೆ ಧ್ಯಾನದಿಂದ ಶಿವಾನುಗ್ರಹವಾದಮೇಲೆ ಶಿವಭಕ್ತರು ತಮ್ಮ
ಸ್ವರೂಪವಾದ ಪರಶಿವ ಬ್ರಹ್ಮವನ್ನು ಸಾಕ್ಷಾತ್ಕರಿಸದೆ ಇರುವರೆ? ಈ ವಿಷಯದಲ್ಲಿ "ಅಗಸ್ತ್ಯಃ
ಕುಂಭಜನ್ಮಾಪಿ ಶಿವಭಕ್ತ್ಯೈವ ಕೇವಲಂ | ಪಪೌ ಸಮುದ್ರಮತುಲಂ ಶಿವಶಕ್ತ್ಯುಪಬೃಂಹಿತಃ"
ಅಂದರೆ ಧ್ಯಾನಯೋಗದಿಂದ ತನ್ನ ಶಿವಶಕ್ತಿಯು ವಿಕಾಸವಾಗಿ, ಅಗಸ್ತ್ಯನು ಸಮುದ್ರವನ್ನು
ಕುಡಿದನು ಎಂಬ ವಾಕ್ಯವು ಪ್ರಮಾಣವಾಗಿದೆ. ಇನ್ನು ಮಂತ್ರಾರ್ಥದ ಸಂಗತಿಯು ತೋರಿಸ
ಲ್ಪಡುವದು. ಪ್ರತಿಬೋಧವಿದಿತಂ ಮತಮಮೃತತ್ವಂಹಿ ವಿಂದತೆ | ಆತ್ಮನಾವಿಂದತೆ ವೀರ್ಯಂ
ವಿದ್ಯಯಾವಿಂದತೇಽಮೃತಂ || ಅಂದರೆ ಚಿತ್ತವು ವಿಕಾಸವನ್ನು ಹೊಂದಿ, ಶಿವನ ಅಂತಃಕರಣರೂಪ
ವಾದ ಚಿಚ್ಛಕ್ತಿಯ ಸ್ವರೂಪವಾಗಲು, ಆ ಅಂತಃಕರಣದಿಂದ ಪರಶಿವಬ್ರಹ್ಮವು ತಿಳಿಯಲ್ಪ
ಡುತ್ತೆ. ನಾನು ಸುಖಿಯು, ನಾನು ದುಃಖಿಯು ಎಂದು ಜೀವಾತ್ಮನ ಪ್ರತ್ಯಕ್ಷವು ಹೇಗೆ ಚಿತ್ತ

ಶೈವಸ್ಯಕಸ್ಯಚಿತ್ | ವೀರಶೈವಾನ್ವಯೇ ಜನ್ಮಪರಮಂ ದುರ್ಲಭಂ ಸ್ಮೃತಂ ತತ್ರಜಾತಾನರಾಃಸರ್ವೇ ವೀರಶೈವಾನರೋತ್ತಮಾಃ || ಇತ್ಯುಕ್ತಪ್ರಕಾರೇಣ ಸರ್ವಶ್ರೇಷ್ಠತಮಂ ವೀರಶೈವಾನ್ವಯೇ ಅತಿದುರ್ಲಭಂ ಜನ್ಮಪ್ರಾಪ್ತವಾನಪ್ಯ ದೃಷ್ಟವಶಾತ್ | ಪರಾಹಂತಾಪಗಾಹಿ ಪ್ರತ್ತಿರಹಿತಶ್ಚೇತ್ಪುನಃ ಸಾಂಸಾರಿಕ ತಾಪತ್ರಯ ರೂಪಾನರ್ಥಂ ಪ್ರಾಪ್ನೋತೀತ್ಯಾಹ || ಇಹೇತಿ |

ಮೂ॥ ಇಹಚೇದವೇದೀದಥ ಸತ್ಯಮಸ್ತಿ ನಚೇದಿಹಾವೇದೀ ನ್ಮಹತೀವಿನಷ್ಟಿಃ । ಭೂತೇಷುಭೂತೇಷು ವಿಚಿತ್ಯ ಧೀರಾಃ ಪ್ರೇತ್ಯಾಸ್ಮಾಲ್ಲೋಕಾದಮೃತಾಭವಂತಿ ॥
ಇತಿ ದ್ವಿತೀಯಃಖಂಡಃ ॥

---

ದಿಂದುಂಟಾಗುವದೊ? ಅದರಂತೆ ಸರ್ವಾತ್ಮಕ ಶಿವನೇ ನಾನು ಎಂಬುವ ಸಾಕ್ಷಾತ್ಕಾರವು ಚಿಚ್ಛಕ್ತಿಯಿಂದುಂಟಾಗುತ್ತದೆ. ಆದುದರಿಂದ, ಪ್ರತಿಬೋಧೇನ-ಚಿಚ್ಛಕ್ತಿಯಿಂದ, ವಿದಿತಂ-ತಿಳಿಯಲ್ಪಟ್ಟದ್ದು ಯಾವದುಂಟೊ? ಅದು ಮತಂ ತಿಳಿಯಲ್ಪಟ್ಟಿತು. ಅಂದರೆ ಪುರುಷನು ತನ್ನ ಚಿತ್ತವನ್ನು ಚಿಚ್ಛಕ್ತಿರೂಪವನ್ನಾಗಿ ಮಾಡಿಕೊಂಡು ಅದರಿಂದ ಯಾವಾಗ ಪರಶಿವನನ್ನು ತಿಳಿಯುವನೋ ಆಗ ಪರಶಿವಜ್ಞಾನವಾಗುತ್ತದೆಂದು ತಿಳಿಯತಕ್ಕದ್ದು. ಇಲ್ಲಿ ಯಾವನಿಂದ ಎಂಬುವ ಕರ್ತೃಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಯಾವ ಕರ್ತೃವಿನಿಂದ ಪ್ರತಿಬೋಧವೆಂಬ ಕರಣದಿಂದ ಬ್ರಹ್ಮವು ತಿಳಿಯಲ್ಪಟ್ಟಿತೋ ಅವನಿಂದಲೇ ತಿಳಿಯಲ್ಪಟ್ಟಿತೆಂದು ತಿಳಿಯಬೇಕಲ್ಲದೆ ಮತ್ತೊಬ್ಬನಿಂದ ತಿಳಿಯಲ್ಪಡುವದಿಲ್ಲವೆಂದು ತಾತ್ಪರ್ಯವಂ ತೋರಿಸುವಲ್ಲಿ ಹಿ ಎಂಬ ಶಬ್ದವು ಅವನು ಅಮೃತತ್ವಂ-ಮುಕ್ತಿಯನ್ನು, ವಿಂದತೆ-ಹೊಂದುತ್ತಾನೆ. ಈ ಬ್ರಹ್ಮಸಾಕ್ಷಾತ್ಕಾರವನ್ನುಂಟುಮಾಡುವ ಶಕ್ತಿಯನ್ನು, ಆತ್ಮನಾ-ಶುದ್ಧನಾದ ಆತ್ಮನಿಂದ, ವೀರ್ಯಂ-ಚಿಚ್ಛಕ್ತಿಯನ್ನು. ವಿಂದತೆ-ಹೊಂದುತ್ತಾನೆ. ವಿದ್ಯಯಾ-ಚಿಚ್ಛಕ್ತಿರೂಪವಾದ ಪರಾಹಂಕಾರವೃತ್ತಿಯಿಂದ, ಅಮೃತಂ-ಮೋಕ್ಷವನ್ನು, ವಿಂದತೆ-ಹೊಂದುತ್ತಾನೆ. ಇಲ್ಲಿ ಎರಡುಸಾರೆ ಅಮೃತವನ್ನು ಹೊಂದುತ್ತಾನೆಂದು ಹೇಳಿರುವದು ಪ್ರತಿಬೋಧದಿಂದಲೇ ಮುಕ್ತಿಯಲ್ಲದೆ ಬೇರೆಯಾದ ಯಾವ ಉಪಾಯದಿಂದಲೂ ಮುಕ್ತಿಯು ಲಭಿಸುವದಿಲ್ಲವೆಂದು ಶಾಂಕರೀಕಾರನು ಈ ಮಂತ್ರದಲ್ಲಿರುವ ಪದಗಳಿಗೆ ಸರಲವಾದ ಅರ್ಥವನ್ನು ತೋರಿಸಿರುವನು. ಈ ಪ್ರಕಾಶಘಾಗಿ ಸಪ್ರಮಾಣವಚನಗಳಿಗೆ ಸರಲವಾದ ಅರ್ಥವನ್ನು ತೋರಿಸಿರುವನು. ಈ ಪ್ರಕಾರವಾಗಿ ಸಪ್ರಮಾಣ ಸಯುಕ್ತಿಕವಾದ ಮಂತ್ರಾರ್ಥ ಸಂಗತಿಯನ್ನು ಪರೀಕ್ಷಕರಾದ ವಿದ್ವಾಂಸರು ಅವಶ್ಯವಾಗಿ ನೋಡತಕ್ಕದ್ದೆಂಬು ಈ ಮಂತ್ರದ ವ್ಯಾಖ್ಯಾನವು ಸಂಪೂರ್ಣವಾದಮೇಲೆ ತಾನೇ ಹೇಳಿರುವನು. ||೧೩|| ಕ್ರಿಮಿ ಕೀಟ ಪತಂಗ ಪಶು ಜನ್ಮಗಳಿಗಿಂತಲೂ ಮನುಷ್ಯನ ಜನ್ಮವು ಶ್ರೇಷ್ಠವಾದದ್ದು. ಇಂಥ ದುರ್ಲಭವಾದ ಮನುಷ್ಯ ಜನ್ಮಕ್ಕಿಂತಲೂ ಯಾವನಾದರೊಬ್ಬ ಶೈವ ಕುಲದಲ್ಲಿ ಜನ್ಮವನ್ನು ಹೊಂದುವದಂತೂ ದುರ್ಲಭವು. ವೀರಶೈವ ವಂಶದಲ್ಲಿ ಜನ್ಮವನ್ನು

ಇಹ ಮನುಷ್ಯೋತ್ತಮ ವೀರಶೈವಜನ್ಮನಿ ಸತಿ ಅವೇದೀಚ್ಛೇತ್ ವಿಶ್ವಾತ್ಮಕ ವಿಶ್ವಾಧಿಕ ಸರ್ವಜ್ಞತ್ವಾದಿಮಹಾನ್ ಶಿವವಿವಾಹಮಿತ್ಯವಗತವಾನ್ ಯದಿ ಅಥ ಅನಂತರಂ, ಸತ್ಯಂ ಪರಶಿವಪದಮಸ್ತಿ ಪ್ರಾಪ್ತಂ ಭವತೀತ್ಯರ್ಥಃ. ನಚೇದೀಹಾವೇದೀತ್. ಅನೇಕಜನ್ಮಾನುಷ್ಠಿತಶ್ರೌತಸ್ಮಾರ್ತಕರ್ಮ ಪರಿಪಾಕಾತ್ ವೀರಶೈವಾನ್ವಯೇ ಜನ್ಮಪ್ರಾಪ್ಯಾಪಿ ಇಹ ಜನ್ಮನಿ ಯದಿ ಪರಶಿವಲಿಂಗಂ ಸ್ವಾಭಿನ್ನತ್ವೇನ ನವಿದಿತವಾನ್, ತದಾಮಹತಿ ಅಪರಿಮಿತಾ ವಿನಷ್ಟಿರ್ವಿನಾಶಃ "ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತೀತಿಸ್ಮೃತೇಃ | ಜನಿಜರಾಮರಣಕಾರಣ ಘೋರಾಪಾರಾಸಾರ ಸಂಸಾರರೂಪ ಸ್ವಶಕ್ತಿಸಂಕೋಚಮಲಾವರಣಲಕ್ಷಣಃ ಸ್ವವಿನಾಶೋಭವತೀತ್ಯರ್ಥಃ | ತಸ್ಮಾತ್ತ್ವಾತವಿಚ್ಛೇದನಸಮರ್ಥಂ ಪರಶಿವಲಿಂಗಮೇವಧ್ಯಾಯೇತ್. "ತದ್ವಿದ್ವಾನಕ್ಷರಂಧ್ಯಾಯೇದ್ಯದೀಚ್ಛೇಚ್ಛಾಂತಿಮಾತ್ಮನ ಇತಿ ಶ್ರುತೇಃ, ಜ್ಞಾತ್ವಾ ಶಿವಂಶಾಂತಿಮತ್ಯಂತಮೇತೀತಿಶ್ರುತೇಶ್ಚ ! ಭೂ

---

ಪಡೆಯುವದಂತೂ ಪರಮ ದುರ್ಲಭವು. ಎಂದು ಕ್ರಿಯಾಸಾರದಲ್ಲಿ ಹೇಳಿದ ಪ್ರಕಾರ ಇಂಥ ಶ್ರೇಷ್ಠವಾದ ವೀರಶೈವ ವಂಶದಲ್ಲಿ ಹುಟ್ಟಿದವನಿಗೆ ಶಾಶ್ವತ ಸುಖಕ್ಕೆ ಕಾರಣವಾದ ಶಿವಾದ್ವೈತ ಜ್ಞಾನವೊಂದಿಲ್ಲದಿದ್ದರೆ ಅವನು ಪುನಃ ಅನರ್ಥವನ್ನು ಹೊಂದಬೇಕಾಗುತ್ತೆಂದು "ಇಹಚೇದವೇದೀತ್" ಎಂಬ ಮಂತ್ರವೂ ಹೇಳುತ್ತದೆ. ಈ ಸರ್ವೋತ್ತಮವಾದ ವೀರಶೈವ ವಂಶದಲ್ಲಿ ಜನ್ಮವನ್ನು ಪಡೆದಮೇಲೆ ಇಲ್ಲಿಯೂ ಶಿವಾದ್ವೈತಜ್ಞಾನವನ್ನು ಸಂಪಾದಿಸಿ ಮುಕ್ತನಾಗದಿದ್ದರೆ ಅನೇಕ ಜನ್ಮಗಳಲ್ಲಿ ಶ್ರೌತಸಾರ್ತ -ಕರ್ಮಾಚರಣೆಯ ಪರಿಪಾಕದಿಂದ ವೀರಶೈವವಂಶದಲ್ಲಿ ಜನ್ಮವನ್ನು ಹೊಂದಿರುವುದು ವ್ಯರ್ಥವಾಗುವದಲ್ಲದೇ ಪುನಃ ಮೊದಲಿನಂತೆ ಸಂಸಾರಚಕ್ರದ ಸೆಳವಿಗೆ ಬಿದ್ದು ಜನನ ಮರಣಗಳಿಗೀಡಾಗಬೇಕಾಗುತ್ತದೆ. ಪುನಃ ತಾಪತ್ರಯಾಗ್ನಿಯಿಂದ ಬೆಂದು ಬೆಂಡಾಗಬೇಕಾಗುತ್ತದೆ ಈ ವೀರಶೈವ ವಂಶದಲ್ಲಿ ಹುಟ್ಟಿದ ಮಾತ್ರಕ್ಕೇನೇ ಮುಕ್ತಿಯಾಗಲಾರದು. ವೀರಶೈವ ವಂಶದಲ್ಲಿ ಹುಟ್ಟಿ ವಿಹಿತ ಕರ್ಮವನ್ನು ಮಾಡದೆ ಅವಿಹಿತ ಕರ್ಮವನ್ನು ಆಚರಿಸುತ್ತಿದ್ದರೆ ಮುಕ್ತಿಯು ಹೇಗೆ ಆದೀತು? ಆದ್ದರಿಂದ ಮೊದಲು ವೀರಶೈವರ ವಂಶದಲ್ಲಿ ಹುಟ್ಟುವದೇ ದುರ್ಲಭವು. ಇಂಥ ಜನ್ಮವನ್ನು ವ್ಯರ್ಥಗೊಳಿಸದೆ ಸರ್ವ ಪ್ರಪಂಚಕ್ಕೆ ಅಧಿಪತಿಯೂ ಸರ್ವ ಪ್ರಪಂಚ ಸ್ವರೂಪನೂ ಸರ್ವಜ್ಞತ್ವಾದಿ ಕಲ್ಯಾಣಗುಣಗಳುಳ್ಳವನೂ ಆದ ಯಾವ ಪರಶಿವನೋ ಅವನೇ ನಾನು ಎಂಬುವ ಶಿವಾದ್ವೈತಜ್ಞಾನವನ್ನು ಪಡೆದುಕೊಂಡು ಜನನ ಮರಣರೂಪಗಳಾದ ದುಃಖಕ್ಕೀಡಾಗದೆ ಮುಕ್ತರಾಗುವುದು ಪುರುಷಾರ್ಥವಾಗಿರುವುದು. ಈ ಶಿವಾದ್ವೈತ ಜ್ಞಾನವಿಲ್ಲದಿದ್ದರೆ ಮನುಷ್ಯನಿಗೆ ವಿನಾಶವೆಂದು ಶ್ರುತಿಯಲ್ಲಿ ಹೇಳಿದಂತೆ, ಅಜ್ಞನೂ ಶಿವಾದ್ವೈತಜ್ಞಾನವಿಲ್ಲದವನೂ, ಗುರುವಾಕ್ಯದಲ್ಲಿ ಶ್ರದ್ಧೆಯಿಲ್ಲದವನೂ, ಸಂಶಯಾವಿಷ್ಟವಾದ ಮನಸ್ಸುಳ್ಳವನೂ ಆದ ಮನುಷ್ಯನು ನಾಶವನ್ನು ಹೊಂದುತ್ತಾನೆ ಎಂದು ಸ್ಮೃತಿಯೂ ಕೂಡಾ ಹೇಳುತ್ತದೆ. ಅಂದರೆ ಜನ್ಮ ಜರಾಮರಣಗಳಿಗೆ ಕಾರಣವಾದುದರಿಂದ ಅತಿ

ತೇಷು. ಭೂತೇಷು ಸಮಸ್ತೇಷು ಚರಾಚರೇಷು ವಿಚಿತ್ಯ. ಅವಿನಾಭಾವಸಂ
ಬಂಧೇನ ಸಕಲ ನಿಷ್ಕಲ ಪರಶಿವಂಜ್ಞಾತ್ವಾ ಧೀರಾಸ್ತಾದೃಶ ಶಿವಾದ್ವೈತಧಿಷ
ಣಾರಮಮಾಣಾ ವೀರಶೈವಾಃ ಪ್ರೇತ್ಯ. ವ್ಯಾವೃತ್ಯಾಸ್ಮಾಲ್ಲೋಕಾತ್ಪುತ್ರ
ಕಲತ್ರಾದ್ಯುಪಲಕ್ಷಿತಾತ್ ಶರೀರಾದೌತ್ಯಕ್ತಾಭಿಮಾನಾಃ ಸಂತಃ ಅಮೃತಾ
ಮುಕ್ತಾ ಭವಂತಿ ||

ಇತಿ ಶ್ರೀಮಜ್ಜಗದ್ಗುರೂಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಶಿದ್ಧಲಿಂಗ
ಶಿವಾಚಾರ್ಯ ಸಂಸ್ಥಾನಾಸ್ಥಾನಪಂಡಿತೇನ ಧರ್ಮರತ್ನಪದಪ್ರತಿಷ್ಠಿತೇನ
ಹುಬ್ಬಳ್ಳೀಪತ್ತನ ಪ್ರದೇಶಾಂತರ್ಗತ ಉಮಚಗಿ ವೃಷ್ಟಿಮಠಾಧಿ
ಷ್ಠಿತೇನ ಶಂಕರಶಾಸ್ತ್ರಿಣಾ ರಚಿತಾ ಕೇನೋಪನಿಷದೋ
ದ್ವಿತೀಯಖಂಡಸ್ಯ ಶಾಂಕರೀವ್ಯಾಖ್ಯಾ
ಸಮಾಪ್ತಾ ||
ಶ್ರೀ ಹರಗುರುಚರ ಚರಣಾರ್ಪಿತಾಭವತು ||

---

ಭಯಂಕರವಾಗಿ ನಿರವಧಿಯಾಗಿ, ಏನೊಂದೂ ಸಾರವಿಲ್ಲದ್ದಾಗಿ, ಮೂರು ಮಲಾವರಣಸ್ವರೂ
ಪವಾಗಿ ಇರುವ ಸಂಸಾರವೆಂಬುದೇ ಪುರುಷನ ವಿನಾಶವೆಂದು ತಿಳಿಯಬೇಕು. ಇಂತಹ ವಿನಾಶವು
ಶಿವಾದ್ವೈತಜ್ಞಾನವಿಲ್ಲದಿದ್ದವನಿಗೆ ಪ್ರಾಪ್ತವಾಗುವದು. ಶಿವಾದ್ವೈತಜ್ಞಾನ ಇದ್ದರೆ ಸತ್ಯವಾದ
ಪರಶಿವಸ್ವರೂಪವು ಪ್ರಾಪ್ತವಾಗುವದೆಂದು ಮಂತ್ರವು ಹೇಳುತ್ತದಲ್ಲದೆ, ಎಲ್ಲಾ ಚರಾಚರ ಪ್ರ
ಪಂಚದಲ್ಲಿಯೂ ಶಿವನು ಅವಿನಾಭಾವ ಸಂಬಂಧದಿಂದ ಇರುವನೆಂದು ತಿಳಿದು, ತನ್ನ ಪುತ್ರಮಿ
ತ್ರಕಲತ್ರಾದಿಗಳಲ್ಲಿಯೂ ತನ್ನ ಶರೀರದಲ್ಲಿಯೂ ಅಹಂಕಾರ ಮಮಕಾರಗಳನ್ನು ಬಿಟ್ಟು ಕೇ
ವಲ ಲಿಂಗಾಂಗ ಸಾಮರಸ್ಯರೂಪವಾದ ಶಿವಾದ್ವೈತಜ್ಞಾನದಲ್ಲಿ ರಮಿಸುವ ಧೀರರು (ವೀರಶೈ
ವರು) ಮುಕ್ತರಾಗುತ್ತಾರೆಂತಲೂ ಮಂತ್ರದ ತಾತ್ಪರ್ಯವೆಂಬಲ್ಲಿಗೆ ಶ್ರೀಮದುಜ್ಜಯಿನೀ ಸದ್ಧ
ರ್ಮ ಸಿಂಹಾಸನಾಧೀಶ್ವರ ಶ್ರೀಮಜ್ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರ ಸಂಸ್ಥಾನಾ
ಸ್ಥಾನಪಂಡಿತರೂ ಧರ್ಮರತ್ನ ಪದವೀ ವಿಭೂಷಿತರೂ ಧಾರವಾಡಜಿಲ್ಲಾ 'ಹುಬ್ಬಳ್ಳಿ' ತಾ
ಲ್ಲೂಕ ಉಮಚಗಿ ಎಂಬ ಗ್ರಾಮದ ಮಠೀಮಠದ ಬ್ರಹ್ಮಶ್ರೀ ಶಂಕರಶಾಸ್ತ್ರಿಗಳವ
ರಿಂದ ರಚಿಸಲ್ಪಟ್ಟ ಕೇನೋಪನಿಷತ್ತಿನ ದ್ವಿತೀಯಖಂಡದ ಶಾಂಕರೀವ್ಯಾಖ್ಯಾ
ನಕ್ಕೆ ಶಿರಸೀ ಶಿವಾದ್ವೈತ ವಿದ್ಯಾವಿಭೂಷಣ ಪದವೀಯಿಂದ ಅಲಂಕರಿಸಲ್ಪ
ಟ್ಟ ಬ್ರಹ್ಮಶ್ರೀ ಪಂಡಿತ ಗುರುಶಾಂತಶಾಸ್ತ್ರಿಗಳಿಂದ ಕನ್ನಡದಲ್ಲಿ
ರಚಿಸಲ್ಪಟ್ಟ ಭಾವದರ್ಪಣವು ಸಮಾಪ್ತವಾದುದು.



ಶಿವೋದಾತಾ ಶಿವೋಭೋಕ್ತಾ ಶಿವಃ ಸರ್ವಮಿದಂ ಜಗತ್ | ಶಿವೋಯಚ್ಛ್ರುತಿಸರ್ವಸ್ವಂ ಯಃ ಶಿವಃ ಸೋಽಹಮೇವಚ|| ಇತಿ ಸಿದ್ಧಾಂತಮಜಾನಾನಾಮಭಿಮತಾಸುರಕರ್ತೃಕ ವಿಜಯಸ್ಯ ಕರ್ತೃಕತ್ವಾನಾಮತಏವ ದೇಹಾದ್ಯಭಿಮಾನರಾಹಿತ್ಯಾಭಾವಾನಾಮಶುದ್ಧಾತ್ಮನಾಮಭಕ್ತಾನಾ ಮಿಂದ್ರಾದಿದೇವಾನಾಮಭಿಮಾನನಾಶಮಂತರಾ ಸ ಬ್ರಹ್ಮಜ್ಞಾನಶಕ್ತಿರೂಪವೀರ್ಯಪ್ರಾಪ್ತಿಃ ತೇಷಾಮಭಿಮಾನನಾಶೇಚ ಆತ್ಮನಾವಿಂದತೆ ವೀರ್ಯಮಿತ್ಯುಕ್ತಾರ್ಥೆ ಆಖ್ಯಾಯಿಕಾ ವ್ಯಾಜೇನ ವೀರ್ಯೋಪಾಯಮಭಿಮಾನರಾಹಿತ್ಯ ಪ್ರಾಧಾನ್ಯಲಕ್ಷಣಂ ಭಕ್ತಾದಿಸ್ಥಲಮಾಹಶ್ರುತಿರಿತಿಜ್ಞಾಯತೆ "ತ್ಯಕ್ತಾಭಿಮಾನೋ, ದೇಹಾದೌಭಕ್ತ

---

ಶಿವನೇ ಎಲ್ಲವನ್ನೂ ಕೊಡುವನು. ಶಿವನೇ ಭೋಗಿಸುವವನು. ಶಿವನು ಪ್ರಪಂಚ ರೂಪನಾಗಿರುವನು. ಶಿವನೇ ಸರ್ವವೇದಸ್ವರೂಪನು. ಅವನೇ ನಾನು ಎಂಬುವ ಶಿವಾದ್ವೈತ ಸಿದ್ಧಾಂತವನ್ನು ತಿಳಿಯದಕಾರಣ ದೇವಾಸುರ ಯುದ್ಧದಲ್ಲಿ ಸಮಗಾದ ಜಯವು ನಮ್ಮಿಂದಲೇ ಆಯಿತು. ನಾವೇ ಅಸುರರನ್ನು ಜಯಿಸಿದೆವೆಂದು ಅಭಿಮಾನವನ್ನು ಹೊಂದಿದ ದೇವತೆಗಳು ಸರ್ವಾಂತರ್ಯಾಮಿಯಾದ ಶಿವನಿಂದಲೇ ಎಲ್ಲಾ ಕಾರ್ಯಗಳಾಗುತ್ತವೆಂದೂ ಅವನೇ ಈ ಅಸುರರನ್ನು ಜಯಿಸಿದನೆಂದು ತಿಳಿಯದೇ ಕೇವಲ ಅಹಂಕಾರಿಗಳಾಗಲು ಇಂಥ ಇಂದ್ರಾದಿ ದೇವತೆಗಳು ದೇಹಾದಿಗಳೇ ಆತ್ಮನೆಂದು ತಿಳಿದ ಕಾರಣ ಅಶುದ್ಧಾತ್ಮರಾದುದರಿಂದಲೇ ಅಭಕ್ತರಾಗಿ ಚ್ಯುತರಾಗುವರೆಂದು ಆ ಸರ್ವಾಂತರ್ಯಾಮಿಯಾದ ದಯಾ ಘನವಾದ ಪರಶಿವ ಮೂರ್ತಿಯು ದೇವತೆಗಳ ಅಭಿಮಾನವನ್ನು ನಾಶಮಾಡುವದಕ್ಕೋಸ್ಕರ ಜ್ಯೋತಿರ್ಮಯವಾದ ಒಂದು ಸ್ತಂಭಾಕಾರವಾಗಿ ಆವಿರ್ಭವಿಸಿ, ಆ ದೇವತೆಗಳೊಡನೆ ಸಂವಾದವನ್ನು ನಡೆಯಿಸುವದರಿಂದ ಮುಂದಣ ಖಂಡಗಳಲ್ಲಿ ಆತ್ಮಶುದ್ಧಿರೂಪ ಉಪಾಯವು ಆಖ್ಯಾಯಿಕಾ ನೆವದಿಂದ ಹೇಳುತ್ತದೆ. ಆತ್ಮಶುದ್ಧಿಯಿಲ್ಲದಿದ್ದರೆ ವೀರ್ಯವಿಲ್ಲವು. ವೀರ್ಯವಿಲ್ಲದಿದ್ದರೆ ಮೋಕ್ಷವಿಲ್ಲವು. ಆದುದರಿಂದ "ಆತ್ಮನಾವಿಂದತೆವೀರ್ಯಂ" ಎಂಬಲ್ಲಿ ವೀರ್ಯಪ್ರಾಪ್ತಿಗೆ ಆತ್ಮಶುದ್ಧಿಯೇ ಕಾರಣವೆಂದು ಶ್ರುತಿಯು ಹೇಳಿ ಈಗ ಆತ್ಮಶುದ್ಧಿಯ ಉಪಾಯವಾದ ಭಕ್ತಾದಿ ಸ್ಥಲವನ್ನು ಹೇಳುತ್ತದೆ. ದೇಹಾದಿಗಳಲ್ಲಿ ಅಭಿಮಾನವಂ ಬಿಟ್ಟವನೇ ಭಕ್ತನು. ಈ ಭಕ್ತನಿಗೇನೇ ಆತ್ಮಶುದ್ಧಿಯು ಇವನಿಗೇನೇ ಚಿಚ್ಛಕ್ತಿರೂಪವಾದ ವೀರ್ಯಪ್ರಾಪ್ತಿಯು. ಇದರಿಂದಲೇ ಮೋಕ್ಷವೂ ಉಂಟಾಗುವುದು. ಈ ವಿಷಯದಲ್ಲಿ ಶಾಂಕರೀಕಾರನು "ತ್ಯಕ್ತಾಭಿಮಾನೋದೇಹಾದೌ ಭಕ್ತ ಇತ್ಯುಚ್ಯತ ಬುಧೈಃ" ಮೊದಲಾದ ಅನೇಕ ಶಿವಾಗಮ ಪ್ರಮಾಣಗಳನ್ನು ಕೊಟ್ಟಿರುವನು. ಶ್ರೌತಸ್ಮಾರ್ತಾದಿ ಸತ್ಕರ್ಮಾಚರಣೆಯಿಂದ ಪಾಪಪುಂಜವನ್ನು ಕಿತ್ತುಹಾಕಿ, ಪುಣ್ಯಪ್ರಭಾವವುಳ್ಳವನೇ ಭಕ್ತಸ್ಥಲದೊಳಗಣ ಪಿಂಡಸ್ಥಲವನ್ನು ಹೊಂದಿದವನು. ಇವನಿಗೆ ಮುಂದುಮುಂದಣ ಸ್ಥಲಗಳು ಸಿದ್ಧಿಸಬೇಕಾದರೆ ತನ್ನ ದೇಹಾದಿಗಳಲ್ಲಿ ಅಭಿಮಾನವಂ ಬಿಟ್ಟು ಗುರುದೇವತೆಗಳಲ್ಲಿಯೇ ಅನುರಾಗ

ಇತ್ಯುಚ್ಯತೆ ಬುಧೈಃ | ತಚ್ಚಿತ್ತಮಚಲಂ ಯಸ್ಯಸವೈಮಾಹೇಶ್ವರಃ ಸ್ಮೃತಃ ||
ಚಿತ್ತಶುದ್ಧಿರ್ಭವೇದ್ಯಸ್ಯ ಸಪ್ರಸಾದೀತ್ಯುದಾಹೃತಃ | ತ್ಯಕ್ತ ಜೀವಭ್ರಮಶ್ಚಾ
ಯಂ ಲಿಂಗಾತ್ಮಾ ಪ್ರಾಣಲಿಂಗಕಃ || ಶಿವನಿತ್ಯತ್ವ ಸಿದ್ಧಾಂತಃ ಸಾನಂದಃ ಶರ
ಣೋಭವೇತ್ | ಶಿವಜೀವೋ ಭಯಭ್ರಾಂತಿರಹಿತಶ್ಚೈಕ್ಯಮುಚ್ಯತೆ || ಇತ್ಯುಕ್ತ
ತ್ವಾತ್ | ಪಿಂಡಸ್ಥಲಸ್ಯ ಭಕ್ತಸ್ಥಲಾಂತರ್ಗತತ್ವಾತ್ ಧ್ಯಾನಾದಿನಾ ಆತ್ಮಶು
ದ್ಧೇರಭಾವೆ ಇಂದ್ರಸ್ಯೋಮಾವಾಕ್ಯಾತ್ ಕಥಂತಸ್ಯ ವೀರ್ಯಸ್ಯ ಬ್ರಹ್ಮಜ್ಞಾ
ನರೂಪಸ್ಯ ಲಾಭಉಕ್ತಃ ಸಂಗಚ್ಛತೆ | ತಸ್ಮಾದಿಯ ಮಾಖ್ಯಾಯಿಕಾ ‚‚ಬ್ರಹ್ಮಹ

---

ವನ್ನು ಬೆಳೆಸುತ್ತಿರಬೇಕು ಹೀಗೆ ಗುರುದೇವತೆಗಳಲ್ಲಿ ಪ್ರೀತಿಯನ್ನು ಹೆಚ್ಚಿಸಿಕೊಂಡಾಗಲೇ ಸಂ
ಪೂರ್ಣ ಭಕ್ತನಾಗುವನು. ಭಕ್ತನಾಗದಿದ್ದವನು ಅಶುದ್ಧಾತ್ಮನು. ಈ ಅಶುದ್ಧಾತ್ಮನಿಗೆ ವೀರ್ಯ
ಪ್ರಾಪ್ತಿಯಿಲ್ಲವು ವೀರ್ಯವಿಲ್ಲದುದರಿಂದ ಅವನಿಗೆ ಮುಕ್ತಿಯೂ ಉಂಟಾಗುವುದಿಲ್ಲವು. ಇಂ
ದ್ರಾದಿ ದೇವತೆಗಳಿಗೆ ಧ್ಯಾನಾದಿಗಳಿಂದ ಆತ್ಮಶುದ್ಧಿಯಿಲ್ಲದಿದ್ದರೆ ಅವರಿಗೆ ಪಾರ್ವತೀದೇವಿಯ
ವಾಕ್ಯದಿಂದ ವ ಎಂದೆ ಹೇಳಲ್ಪಡುವ ಬ್ರಹ್ಮಜ್ಞಾನರೂಪವಾದ ವೀರ್ಯಲಾಭವು ಸಂಗತವಾಗ
ಲಾರದು. ಆದ್ದರಿಂದ ''ಬ್ರಹ್ಮಹದೇವೇಭ್ಯೋವಿಜಗ್ಯೆ'' ಇದೇ ಮೊದಲಾದ ಕಥಾ ಸಂವಾದವು
ಬ್ರಹ್ಮಜ್ಞಾನರೂಪವಾದ ವೀರ್ಯದ ಉಪಾಯವನ್ನು ತೋರಿಸುವದಕ್ಕೆಂದು ಕಂಡುಬರುತ್ತದೆ.
ಅಥವಾ ದೇವತೆಗಳ ಅಭಿಮಾನವನ್ನು ಹೋಗಲಾಡಿಸಿ ಅವರನ್ನು ಭಕ್ತರನ್ನಾಗಿ ಮಾಡಬೇಕೆಂತ
ಲೂ, ಆ ಭಕ್ತಿಯಿಂದ ಅವರಿಗೆ ಸದ್ಗತಿಯನ್ನು ಕೊಡಬೇಕೆಂತಲೂ, ದೇವತೆಗಳ ನೇತ್ರಕ್ಕೆ
ಗೋಚರಿಸುವಂತ ಆ ನಿಷ್ಕಲ ಪರಬ್ರಹ್ಮವು ಸಾಕಾರ ಜ್ಯೋತಿರ್ಲಿಂಗರೂಪವಾಗಿ ಆವಿರ್ಭವಿಸಿತು.
ಆದಕ್ಕೆ ದೇವತೆಗಳು ಈ ಮುಂದೆ ಕಾಣುವ, ಸ್ಥಂಭಾಕಾರವಾಗಿರುವ, ಜ್ಯೋತಿಯೇನಿರಬಹು
ದೆಂದು ತಮ್ಮತಮ್ಮೊಳಗಾಲೋಚಿಸಿ, ಅಗ್ನಿಯೇ! ಇದೇನು? ಈ ಯಕ್ಷನನ್ನು ತಿಳಿದು
ಕೊಂಡುಬಾ ಎಂದು ಅಗ್ನಿಗೆ ಆಜ್ಞೆಯಂ ಮಾಡಲು, ಅಗ್ನಿಯು ಅದರ ಸಮೀಪಕ್ಕೆ ಹೋಗ
ಲಾಗಿ, ಆ ಜ್ಯೋತಿರೂಪವಾದ ವಸ್ತುವು ಯಲೋ ನೀನ್ಯಾರು, ನಿನ್ನಲ್ಲಿ ಸಾಮರ್ಥ್ಯವೇನು?
ಎಂದು ಪ್ರಶ್ನಮಾಡಿದ್ದಕ್ಕೆ ನನ್ನಲ್ಲಿ ಯಲ್ಲಾ ಜಗತ್ತನ್ನು ಸುಡುವ ಸಾಮರ್ಥ್ಯವದೆ. ನಾನು
ಅಗ್ನಿಯು. ಎಂದು ಉತ್ತರವನ್ನು ಹೇಳಲು, ಹಾಗಾದರೆ ಹುಲ್ಲುಕಡ್ಡಿಯನ್ನು ಸುಡು. ನಿನ್ನ
ಸಾಮರ್ಥ್ಯವನ್ನು ನೋಡೋಣವೆಂದು ಆ ಜ್ಯೋತಿರ್ಲಿಂಗರೂಪವಾದ ಯಕ್ಷನು ಅಗ್ನಿಯ
ಮುಂದೆ ಹುಲ್ಲುಕಡ್ಡಿಯನ್ನಿಡಲು, ಅದನ್ನು ಅಗ್ನಿಯು ಸುಡುವುದಕ್ಕೆ ಸಾಮರ್ಥ್ಯವಿಲ್ಲದೆ
ಮುಖಭಂಗಿತನಾಗಿ, ತನ್ನ ಅಭಿಮಾನವನ್ನು ಬಿಟ್ಟು, ಇಂದ್ರಾದಿ ದೇವತೆಗಳೆಡೆಗೆ ಬಂದು,
ನನ್ನಿಂದ ಆ ಪೂಜ್ಯವಸ್ತುವನ್ನು ತಿಳಿಯುವದಾಗಲಿಲ್ಲವು ಎಂದು ಹೇಳಲು. ಆ ದೇವತೆಗಳು
ವಾಯುವನ್ನು ಕಳುಹಿಸಿದರು. ಆ ದೇವತೆಯನ್ನು ನೋಡಿ ಆ ಯಕ್ಷನು ಯಲೋ
ನೀನ್ಯಾರು? ನಿನ್ನಲ್ಲಿ ಸಾಮರ್ಥ್ಯವೇನು? ಎಂದು ಕೇಳಲು, ವಾಯುವು ಏಕಕಾಲದಲ್ಲಿ
ಈ ಜಗತ್ತನ್ನು ಹಾರಿಸಿಕೊಂಡು ಹೋಗುವ ಸಾಮರ್ಥ್ಯವು ನನ್ನಲ್ಲಿದೆ. ನನಗೆ ವಾಯು
ಯೆಂ ಈ ಜಗತ್ತನ್ನು ಹಾರಿಸಿಕೊಂಡು ಹೋಗುವ ಸಾಮರ್ಥ್ಯವು ನನ್ನಲ್ಲಿದೆ.

ದೇವೇಭ್ಯೋ ವಿಜಿಗ್ಯೇ" ಇತ್ಯಾದಿಕಾ "ಆತ್ಮನಾ ವಿಂದತೇ ವೀರ್ಯಮಿತ್ಯುಕ್ತಸ್ಯ ವೀರ್ಯಸ್ಯೋ"ಪಾಯಪ್ರದರ್ಶನಾರ್ಥಾ ಇತಿ ನಿಶ್ಚೀಯತೇ । ಅಥವಾ ಪ್ರಾದುರ್ಭೂತ ಯಕ್ಷಸ್ಯೇಂದ್ರಾದಿ ಚಕ್ಷುರ್ಗ್ರಾಹ್ಯಸ್ಯ ಬ್ರಹ್ಮತ್ವಕಥನಾತ್ "ಯಚ್ಚಕ್ಷುಷಾನಪಶ್ಯತೀ"ತ್ಯಾದಿನಾ "ತದೇವಬ್ರಹ್ಮತ್ವಂ ವಿದ್ಧಿ ನೇದಂಯದಿದಮುಪಾಸತೇ" ಇತ್ಯಂಶೇನೋಕ್ತಸ್ಯಬ್ರಹ್ಮತ್ವ ಪ್ರತಿಷೇಧಸ್ಯ ಮಂದಬುದ್ಧೀನಾ ಮಪ್ರಾಕೃತದೃಕ್ಕಲಾದಿಗ್ರಾಹ್ಯೇಷ್ಟಾದಿ ಲಿಂಗಾಪ್ರತಿಯೋಗಿತಾಕತ್ವಸ್ಯ ಪ್ರದರ್ಶನಾರ್ಥೇಯ ಮಾಖ್ಯಾಯಿಕಾ ಆರಭ್ಯತೇ ॥ ಬ್ರಹ್ಮಹದೇವೇಭ್ಯೋ ವಿಜಿಗ್ಯೇ ಇತಿ ॥

---

ವೆಂದು ಕರೆಯುವರು. ಎಂದು ಹೇಳಲು, ಯಕ್ಷನು ಹಾಗಾದರೆ ಈ ತೃಣವನ್ನು ಮೇಲಕ್ಕೆ ಹಾರಿಸು ನೋಡೋಣ ಎಂದು ಒಂದು ಹುಲ್ಲುಕಡ್ಡಿಯನ್ನು ಆ ವಾಯುವಿನ ಎದುರಿಗೆ ಇಟ್ಟನು. ವಾಯುವಿಗೆ ಅದನ್ನು ಹಾರಿಸುವದಕ್ಕೆ ಸಾಮರ್ಥ್ಯ ಸಾಲದೇ. ತನ್ನ ಗರ್ವವನ್ನು ಬಿಟ್ಟು ಇಂದ್ರಾದಿ ದೇವತೆಗಳ ಬಳಿಗೆ ಹೋಗಿ, ನನ್ನಿಂದ ಅದನ್ನು ತಿಳಿಯುವುದಕ್ಕಾಗಲಿಲ್ಲವು. ಎಂದು ಹೇಳಲು, ಇಂದ್ರನು ನಾನೇ ಇದನ್ನು ಪರೀಕ್ಷಿಸುವೆನೆಂದು ಹಮ್ಮಿನಿಂದ ಹೊರಟು ಹೋಗಿ ನೋಡಲಾಗಿ ಆ ವಸ್ತುವು ಕಾಣದಂತೆ ಆಯಿತು. ಇಂದ್ರನು ಇದೇನಾಶ್ಚರ್ಯವು. ಎಂದು ಆ ಲಿಂಗಮೂರ್ತಿರೂಪವಾದ ಯಕ್ಷವನ್ನು ಧ್ಯಾನಿಸುತ್ತ ಅಲ್ಲಿಯೇ ಕುಳಿತುಕೊಂಡನು. ಅನಂತರ ಇವನ ಭಕ್ತಿಗೆ ಮೆಚ್ಚಿ, ಆ ಶಿವಚಿಚ್ಛಕ್ತಿರೂಪವಾದ ವಿಮರ್ಶಶಕ್ತಿಯು ತನ್ನ ಸ್ಥೂಲಪರಿಣಾಮವಾದ ಪಾರ್ವತಿ ಸ್ವರೂಪವನ್ನು ತಾಳಿ ಆವಿರ್ಭವಿಸಿತು. ಇಂಥಾ ಅತಿಸುಂದರವಾದ ಪಾರ್ವತಿಯ ಸ್ವರೂಪವನ್ನು ನೋಡಿ, ಎಲೈ ಮಹಾದೇವಿಯೇ ಈ ಪೂಜ್ಯವಾದ ವಸ್ತುವಾವದು ? ಎಂದು ಪ್ರಶ್ನೆಮಾಡಲು, ಆ ಪಾರ್ವತೀದೇವಿಯು ಈ ಜಗತ್ತನ್ನು ಹುಟ್ಟಿಸುವ, ರಕ್ಷಿಸುವ, ನಾಶಮಾಡುವ, ನಿಯಮಿಸುವ, ಅನುಗ್ರಹಿಸುವ, ಲಿಂಗಮೂರ್ತಿಯಾದ ಪರಶಿವಬ್ರಹ್ಮವೇ ಇದೆಂದು ಉತ್ತರವನ್ನು ಹೇಳಿದಳು. ಎಂಬುವ ಮುಂದಣ ಕಥಾಪ್ರಸಂಗದಲ್ಲಿ ನೇತ್ರಕ್ಕೆ ಗೋಚರವಾದ ಆ ಯಕ್ಷಮೂರ್ತಿಗೆ ಪಾರ್ವತಿಯು ಬ್ರಹ್ಮವೆಂದು ಹೇಳದಿದ್ದರೆ ಹಿಂದೆ ಯಾವದು ನೇತ್ರಕ್ಕೂ ಮನಸ್ಸಿಗೂ ಗೋಚರವಾಗುವದಿಲ್ಲವೋ ಅದು ಬ್ರಹ್ಮವು. ಮತ್ತು ಯಾವದನ್ನು ಜನವು ಉಪಾಸನೆಮಾಡುತ್ತದೆಯೋ ಅದು ಬ್ರಹ್ಮವಲ್ಲವು ಎಂದು ಹೇಳಿದ ಸಂದರ್ಭದಿಂದ ನೇತ್ರಕ್ಕೆ ಗೋಚರಿಸುವ ಇಷ್ಟಲಿಂಗವು ಕೂಡ ಬ್ರಹ್ಮವಲ್ಲವೆಂದು ಮಂದಬುದ್ಧಿಗಳು ತಿಳಿಯುತ್ತಿದ್ದರು. ಈಗ ಆ ಸಾಕಾರಮೂರ್ತಿಯಾದ ಯಕ್ಷನಿಗೆ ಪಾರ್ವತಿಯು ಬ್ರಹ್ಮನೆಂದು ಪ್ರಯೋಗಿಸಿದಕಾರಣ ಸಾಕಾರವಾದ ಇಷ್ಟಲಿಂಗವು ಕೂಡ ಬ್ರಹ್ಮವೆಂದು ಸಿದ್ಧವಾಯಿತು. ಆದುದರಿಂದ ಹಿಂದೆ ಬ್ರಹ್ಮವಲ್ಲವೆಂದು ಶ್ರುತಿಯು ನಿಷೇಧಿಸುವದು. ಹಿಂದೆ ನಾವು ಹೇಳಿದಂತೆ ಪ್ರತಿಮಾಕಾರವಾದ ವಿಷ್ಣ್ವಾದಿ ಮೂರ್ತಿಗಳಿಗೆಂದು ಸ್ಪಷ್ಟವಾಯಿತು. ಈ ತತ್ವವನ್ನು ತೋರಿಸುವದಕ್ಕಾಗಿ ಮುಂದಣ "ಬ್ರಹ್ಮಹದೇವೇಭ್ಯೋ ವಿಜಿಗ್ಯೇ" ಮೊದಲುಗೊಂಡು ಆಖ್ಯಾಯಿಕಾ ರೂಪದಿಂದ ಆರಂಭಿಸಲ್ಪಡುತ್ತದೆ.

---

ಮೂ॥ ಬ್ರಹ್ಮಹದೇವೇಭ್ಯೋವಿಜಿಗ್ಯೇ ತಸ್ಯ ಬ್ರಹ್ಮಣೋ ವಿಜಯೇ ದೇವಾ ಅಮಹೀಯಂತ । ತ ಐಕ್ಷಂತ್ರಾಸ್ಮಾಕಮೇವಾಯಂವಿಜಯೊಅಸ್ಮಾಕಮೇವಾಯಂ ಮಹಿಮೇತಿ ॥೧೪॥೧॥

ಶಾಂ॥ ಬ್ರಹ್ಮ ಹ ಸರ್ವತತ್ವಾನಾಮುಪರಿಸ್ಥಿತಂ, ''ಊರ್ಧ್ವಾಯನಮ ಊರ್ಧ್ವಲಿಂಗಾಯನಮಃ'' ಇತಿ ಶ್ರುತಿಪ್ರತಿಪಾದ್ಯಂ | ಚಿಚ್ಛಕ್ತಿಪೀಠಸಹಿತಂ ಲಿಂಗಂ ನಿಷ್ಕಲಂ ದೇವೇಭ್ಯೋದೇವಾನಾಂ ಪ್ರಯೋಜನಾಯ, ವಿಜಿಗ್ಯೇ ಜಿತವದಸುರಾನ್ | ದೇವಾಸುರಸಂಗ್ರಾಮೆ ಅಸುರಾನ್ಜಿತ್ವಾ ಅಭಯಾನ್ ಸುರಾನಕರೋತ್ | ತಸ್ಯಬ್ರಹ್ಮಣೋಹಕಿಲವಿಜಯೇ ದೇವಾ ಇಂದ್ರಾದಯ ಅಮಹೀಯಂತ ಪೂಜಿತಾ ಅಭವನ್ ಅವಿಜ್ಞಾತ ತದ್ಬ್ರಹ್ಮಕರ್ತೃಕಾಃಸಂತಃ ಅಸ್ಮತ್ಕರ್ತೃಕತ್ವ

---

“ಊರ್ಧ್ವಲಿಂಗಾಯನಮಃ '' ಎಂಬುವ ಶ್ರುತಿಯಿಂದ ಪ್ರತಿಪಾದ್ಯವಾಗಿಯೂ ಶಿವಾದಿ ಧರಣ್ಯಂತಗಳಾದ ತತ್ವಗಳಿಗೆ ಅಧಿಕವಾಗಿಯೂ ಚಿಚ್ಛಕ್ತಿ ಎಂಬ ಪೀಠಸಹಿತವಾಗಿಯೂ ಇರುವ ಯಾವ ನಿಷ್ಕಲಪರಶಿವಬ್ರಹ್ಮವೋ? ಅದುವೇ ಸದ್ಗುಣಶಾಲಿಗಳಾದ ಇಂದ್ರಾದಿ ದೇವತೆಗಳಿಗೂ, ರಾಕ್ಷಸರಿಗೂ, ನಡೆದ ಯುದ್ಧದಲ್ಲಿ ರಾಕ್ಷಸರನ್ನು ಜಯಿಸಿತು. ಅನಂತರ ಇಂದ್ರಾದಿ ದೇವತೆಗಳು ರಾಕ್ಷಸರನ್ನು ಜಯಿಸಿದವರು ನಾವೇ ಎಂದು ಅಹಂಕಾರಪರವಶರಾಗಿ ನಮಗಾದ ಜಯವು ಆ ಸರ್ವಾಂತರ್ಯಾಮಿಯಾದ ಶಿವನಿಂದಲೇ ಆಯಿತು ಎಂದು ತಿಳಿಯದೆ ನಮ್ಮಿಂದಲೇ ರಾಕ್ಷಸರಿಗೆ ಅಪಜಯವಾಯಿತು. ನಾವೇ ಅವರನ್ನು ಜಯಿಸಿರುವದರಿಂದ ನಾವುಗಳೇ ಶ್ರೇಷ್ಠರು, ಬಲಿಷ್ಠರು, ಎಂದು ತಿಳಿದು ಇಂದ್ರಾದಿದೇವತೆಗಳು ಅತಿಶಯಗರ್ವದಿಂದ ಮೆರೆಯುತ್ತಿದ್ದರು.

ಪೂರ್ವಕಲ್ಪದಲ್ಲಿ ಲೋಕಪ್ರಸಿದ್ಧರಾದ ಬ್ರಹ್ಮ ವಿಷ್ಣ್ವಾದಿ ದೇವತೆಗಳು ನಾನು ಹೆಚ್ಚು ತಾನು ಹೆಚ್ಚು ಎಂದು ಗರ್ವದಿಂದ ಯುದ್ಧಕ್ಕೆ ಸನ್ನದ್ಧರಾಗಿ ಯುದ್ಧವನ್ನು ಮಾಡುತ್ತಿರಲು ಸರ್ವಜ್ಞ ಮೂರ್ತಿಯಾದ ಪರಶಿವನು ಅವರ ಅಹಂಕಾರವನ್ನು ನಾಶಮಾಡುವದಕ್ಕಾಗಿ ಆ ಬ್ರಹ್ಮ ವಿಷ್ಣು ದೇವತೆಗಳ ಮಧ್ಯದಲ್ಲಿ ಸ್ತಂಭಾಕಾರವಾದ ಜ್ಯೋತಿಸ್ಸ್ವರೂಪವನ್ನು ಧರಿಸಿ ಕಾಣಿಸಿಕೊಂಡನು. ಎಂದು ಪುರಾಣದಲ್ಲಿ ಹೇಳಲ್ಪಟ್ಟಪ್ರಕಾರ, ಇಂದ್ರಾದಿ ದೇವತೆಗಳ ಅಭಿಮಾನವಂ ನಾಶಮಾಡುವದಕ್ಕಾಗಿ ನಿಷ್ಕಲ ಪರಶಿವನೇ ಸ್ತಂಭಾಕಾರವಾದ ಆಕಾರವನ್ನು ಧರಿಸಿದನು. ಜಲವು ಘಟ್ಟಿಗೊಂಡು ಆಲಿಕಲ್ಲಾದಂತೆ ನಿಷ್ಕಲವಸ್ತುವೇ ಸಕಲವಾಯಿತು. ಆದುದರಿಂದ ಇಂದ್ರಾದಿ ದೇವತೆಗಳಿಗೆ ಗೋಚರಿಸಿಕೊಂಡಿತು. ಎಂಬುವದನ್ನು ಈ ಮುಂದಣ ಮಂತ್ರವು ಹೇಳುತ್ತದೆ. ಸರ್ವ ಕಾರ್ಯವನ್ನೂ ಈಶ್ವರನೇ ಮಾಡತಕ್ಕವನೆಂಬುವದನ್ನು ತಿಳಿಯದೆ, ನಾವೇ ಅಸುರರನ್ನು ಜಯಿಸಿದೆವೆಂದು ತಿಳಿದುಕೊಂಡ ದೇವತೆಗಳ ಗರ್ವವನ್ನು ಪರಿಹರಿಸಿ, ಅವ

ಮೇವಾಸ್ಯೇತ್ಯಭಿಮತವಂತಃ | ತದಭಿಮಾನಮೇವಾಹ ತೇ ದೇವಾ ಐಕ್ಷಂತ ಜ್ಞಾತವಂತಃ | ಕಿಮಿತ್ಯಯಮಸುರಾಣಾಂ ವಿಜಯೋಸ್ಮಾಕಮೇವಾಸ್ಮಾಕಮೇವಾಯಂ ಮಹಿಮೇತಿ | ಪುರಾಕಲ್ಪೇ ಮಹಾಕಾಲೇ ಪ್ರಳಯೇ ಲೋಕವಿಶ್ರುತೇ | ಅಯುಧ್ಯೇತಾಮಾತ್ಮಮಾನೌ ಬ್ರಹ್ಮವಿಷ್ಣೂ ಪರಸ್ಪರಂ || ತಯೋರ್ಮಾನಂ ನಿರಾಕರ್ತುಂ ತನ್ಮಧ್ಯೇ ಪರಮೇಶ್ವರಃ | ನಿಷ್ಕಲಃ ಸ್ತಂಭರೂಪೇಣ ಸ್ವರೂಪಂ ಪ್ರತ್ಯದರ್ಶಯತ್ || ಇತ್ಯುಕ್ತರೀತ್ಯಾ ಇಂದ್ರಾದೀನಾಮಭಿಮಾನ ನಿರಾಕರಣಾಯ ತದೇವನಿಷ್ಕಲ ಪರಶಿವಲಿಂಗಮೇವ ಜಲ ಕರಕ ನ್ಯಾಯೇನ ದೃಶ್ಯರೂಪೇಣಾವಿರ್ಭೂತಮಿತ್ಯಾಹ | ತದ್ಧೈಷಾಮಿತಿ ||

**ಮೂ|| ತದ್ಧೈಷಾಂ ವಿಜಜ್ಞೌ ತೇಭ್ಯೋ ಹ ಪ್ರಾದುರ್ಬಭೂವ ತನ್ನವ್ಯಜಾನತ ಕಿಮಿದಂ ಯಕ್ಷಮಿತಿ ||೧೫||೨||**

---

ರಿಗೆ ಸದ್ಗತಿ ಎಂಬ ಪ್ರಯೋಜನವನ್ನುಂಟುಮಾಡಬೇಕೆಂಬುದ್ದೇಶದಿಂದ ತನ್ನ ಸ್ವಾತಂತ್ರ್ಯ ಶಕ್ತಿಯಿಂದ ದೃಶ್ಯಸ್ತಂಭಾಕಾರವಾಗಿ ಕರಗಿದ ತುಪ್ಪವು ಹೆತ್ತ ತುಪ್ಪವಾದಂತೆ ಇಂದ್ರಾದಿ ದೇವತೆಗಳಿಗೆ ಕಾಣಿಸಿಕೊಂಡಿತು. ಅಂದರೆ ತನ್ನ ಶಕ್ತಿಯಿಂದ ಪ್ರಾಪ್ತವಾದ ಅಖಂಡ ಗೋಲಕಾಕಾರವಾದ ಒಂದು ಸ್ವರೂಪವನ್ನು ಧರಿಸಿತು. ಈ ವಿಷಯದಲ್ಲಿ ಘೃತಕಾಠಿಣ್ಯನ್ಯಾಯದಂತೆ ಸಚ್ಚಿದಾನಂದರೂಪವಾದ ಮೂರ್ತಿಯು ಶಿವನಿಗೆ ಅತಿರಿಕ್ತವಾಗಿಲ್ಲವು, ಎಂಬ ವ್ಯಾಸೋಕ್ತಿಯು ಪ್ರಮಾಣವಾಗಿರುವುದು. ಮತ್ತು ವ್ಯಾಪಕವಾಗಿದ್ದರೂ, ನಿರಂಜನವಾಗಿದ್ದರೂ, ನಿರ್ಗುಣ ನಿಷ್ಕಲವಾಗಿದ್ದರೂ ಭಕ್ತರ ಅನುಗ್ರಹಕ್ಕಾಗಿ ನೀರು ಘಟ್ಟಿಗೊಂಡು ಆಲೀಕಲ್ಲಾದಂತೆ ಚಿದಾನಂದರೂಪವಾದ ಬ್ರಹ್ಮವು ಯಾವದೋಒಂದು ಘನೀಭಾವರೂಪವಾದ ಸ್ವರೂಪವನ್ನು ಧರಿಸಿರುವುದರಿಂದ, ಪರಿಚ್ಛಿನ್ನವಾದ ಲಿಂಗಮೂರ್ತಿಯೆಂಬುವದು ಆ ಪರಬ್ರಹ್ಮದ ಯಥಾರ್ಥವಾದ ಸ್ವರೂಪವನ್ನೇ ಆಗಿರುವುದೆಂದು ಅಪ್ಪಯ್ಯದೀಕ್ಷಿತರೂ ಕೂಡ ಆತ್ಮಾರ್ಪಣಸ್ತವದಲ್ಲಿ ಹೇಳಿರುವರು. ಆದುದರಿಂದ ಅಪರಿಚ್ಛಿನ್ನವಾದ ಸಚ್ಚಿದಾನಂದ ಪರಬ್ರಹ್ಮವೇ ಇಂದ್ರಾದಿಗಳ ಅನುಗ್ರಹಕ್ಕಾಗಿ ತನ್ನ ಲೀಲೆಯಿಂದ ನಿರ್ಮಿತವಾದ ದೃಶ್ಯವಾದ ಲಿಂಗಮೂರ್ತಿಯ ಸ್ವರೂಪದಿಂದ ಆವಿರ್ಭವಿಸಿದಕಾರಣ, ಆಶ್ಚರ್ಯಚಕಿತರಾದ ದೇವತೆಗಳು ಮುಂಭಾಗದಲ್ಲಿ ಕಾಣುವ ಅತಿ ಪವಿತ್ರವಾದ ಮಂಗಳಮೂರ್ತಿಯನ್ನು ತಿಳಿಯಲಿಲ್ಲವು. ಇಲ್ಲಿ ಕೆಲವು ಜಗನ್ಮಿಥ್ಯಾತ್ವವಾದಿಗಳು ಶಂಕಿಸುವದೇನೆಂದರೆ, ಆ ಇಂದ್ರಾದಿಗಳ ಮುಂದೆ ಆವಿರ್ಭವಿಸಿದ ಜ್ಯೋತಿರ್ಲಿಂಗಮೂರ್ತಿಯು ದೃಶ್ಯವಾಗಿರುವದರಿಂದ ಅದು ಮಿಥ್ಯಾಭೂತವು. ಯಾಕೆಂದರೆ ದೃಶ್ಯವಾಗಿರುವದರಿಂದ ಜಗತ್ತು ಸ್ವಪ್ನದಂತೆ ಅಸತ್ಯವಾಗಿರುವುದೆಂದವರ ಮತವಷ್ಟೆ. ಈ ಮತವನ್ನು ವಿಚಾರಿಸೋಣ. ಎಲೈ ಮಿಥ್ಯಾವಾದಿಯೆ! ದೃಶ್ಯವಾದದ್ದೆಲ್ಲವೂ ಅಸತ್ಯವು. ಬ್ರಹ್ಮವೊಂದೇ ಸತ್ಯವು ಎಂಬ ಪಕ್ಷದಲ್ಲಿ ದೃಶ್ಯವಾದ

ಶಾಂ॥ ತದ್ಧಬ್ರಹ್ಮಕಿಲೈಷಾಂ ದೇವಾನಾಮಜ್ಞಾತ ಸರ್ವಾಂತರ್ಯಾಮಿತ್ವ
ರಸರ್ವಕರ್ತೃಕತ್ವಾನಾಂ ಜ್ಞಾತಾಸುರಕರ್ಮಕ ಸ್ವಕರ್ತೃಕ ವಿಜಯಾನಾಂ ವಿಜಿ
ಜ್ಞ್ಞಾ. ತದಭಿಮಾನಂ ವಿದಿತವತ್ತಸ್ಯ ಸರ್ವಜ್ಞತಾದಿಶಕ್ತಿಮತ್ವಾತ್ । ತಸ್ಮಾತ್ತ
ತ್ರೇಷಾಮುಹಂಕಾರಸಿರಸನಾಯ । ತೇಭ್ಯಸ್ತೇಷಾಮರ್ಥಾಯಾನುಗ್ರಹಾಯ
ಸ್ವಾಭಾವಿಕಸ್ಯ ಸ್ವಾತಂತ್ರ್ಯಾದಿಮಹಿಮ್ನಾದೃಶ್ಯೇನ ಸ್ತಂಭರೂಪೇಣೇಂದ್ರಿಯ
ಗೋಚರತಯಾ ಪ್ರಾದುರ್ಬಭೂವ । ಘೃತಕಾಠಿಣ್ಯನ್ಯಾಯೇನ ಸ್ವಶಕ್ತಿ ವಿಜೃಂ
ಭಿತಾಖಂಡಗೋಲಕಾಕಾರಂ ಕಿಂಚಿತ್ಸ್ವರೂಪಮಾದಧೆ ಇತ್ಯರ್ಥಃ । ಉಕ್ತಂಚ
ಭಗವತಾವ್ಯಾಸೇನಾಪಿ । ಘೃತಕಾಠಿಣ್ಯವನ್ಮೂರ್ತಿಃ ಸಚ್ಚಿದಾನಂದಲಕ್ಷಣಾ ।
ಶಿವಾದ್ಭೇವೇನಸ್ಯೈವಾಸ್ತಿ ಶಿವಏವಹಿಸರ್ವದಾ ॥ ಇತಿ. ಉಕ್ತಂಚದೀಕ್ಷಿತಚರಣೈ
ರಪಿ । ಆನಂದಾಬ್ಧೇಃಕಮಪಿಚಘನೀಭಾವಮಾಸ್ಥಾಯರೂಪಮ್ ॥ ಇತಿ
ತಸ್ಮಾತ್ಪರಶಿವಸ್ಯಾ ಪರಿಚ್ಛಿನ್ನಸ್ಯ ನಿರ್ವಿಕಲ್ಪ ನಿರಾಕಾರ ನಿರಸ್ತಾಶೇಷವಿಪ್ಲವ
ಸರ್ವಜ್ಞ ಸರ್ವವ್ಯಾಪಕ ಸರ್ವಶಕ್ತಿ ನಿರಂಕುಶಸ್ಯ ಸ್ವಪ್ರಕಾಶಸ್ಯೇಂದ್ರಾದ್ಯನುಗ್ರ
ಹಾರ್ಥಂ ಸ್ವಲೀಲಾನಿರ್ಮಿತಾದೃಶ್ಯಲಿಂಗಮೂರ್ತಿರೂಪೇಣಾವಿರ್ಭೂತತ್ವಾತ್ ।
ವಿಸ್ಮಯಾಪನ್ನಾದೇವಾಸ್ತತ್ಸ್ವರೂಪಂ ನವ್ಯಜಾನತ ನ ವಿದಿತವಂತಃ ಕಿಮಿದಂ

---

ಯಕ್ಷನಿಗೆ ಬ್ರಹ್ಮವೆಂದು ಪಾರ್ವತೀದೇವಿಯು ಉಪದೇಶವು ಹೇಗೆ ಸಂಗತವಾಗುತ್ತದೆ? ದೃಶ್ಯ
ವಾದದ್ದು ಮಿಥ್ಯೆಯೆಂದರೆ- ಯಕ್ಷಬ್ರಹ್ಮಕ್ಕೂ ಮಿಥ್ಯಾತ್ವವು ಬರಬೇಕಾಗುವದು. ಮತ್ತು ಜಗ
ತ್ತು ಮಿಥ್ಯೆ ಎಂಬ ವಿಷಯದಲ್ಲಿ ಸ್ವಪ್ನದೃಷ್ಟಾಂತವು ಸಂಭವಿಸುವದಿಲ್ಲವು ಸ್ವಪ್ನಪ್ರಪಂಚಕ್ಕೂ
ಜಾಗ್ರತ್ ಪ್ರಪಂಚಕ್ಕೂ ಬಹಳ ವೈಲಕ್ಷಣ್ಯವಿರುವದು. ಸ್ವಪ್ನದಲ್ಲಿ ವಿಷಪಿಯೂಷಪಾನಗಳಿಂದ
ಮನುಷ್ಯನು ಮೃತನಾಗುವದಿಲ್ಲವು. ಜಾಗ್ರತ್ಪ್ರಪಂಚದಲ್ಲಿ ವಿಷವಂ ಪಾನಮಾಡಿದರೆ ಮೃತನಾ
ಗುವನು. ಆದಕಾರಣ ಸ್ವಪ್ನದೃಷ್ಟಾಂತವು ಅಸಿದ್ಧವು. ಇದಲ್ಲದೆ ಎಲೈ ಮಿಥ್ಯಾವಾದಿಯೇ!
ನಿನ್ನ ಮಿಥ್ಯಾತ್ವವಂಪರೇನು? ಬ್ರಹ್ಮಜ್ಞಾನದಿಂದ ಬಾಧ್ಯವಾದದ್ದು ಮಿಥ್ಯೆಯೆಂದನ್ನುವಿಯೋ?
ಅಥವಾ ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿಲ್ಲದ್ದು ಮಿಥ್ಯೆಯೆಂದನ್ನುವಿಯೋ? ಮೊದಲಿನ
ವಿಕಲ್ಪವು ಯುಕ್ತವಾಗುವದಿಲ್ಲವು. ಯಾಕಂದರೆ "ಸರ್ವೋವೈರುದ್ರ" ಎಂಬುವು ಮೊದಲಾದ
ಶ್ರುತಿಗಳು ಪ್ರಪಂಚವು ಶಿವಸ್ವರೂಪವೆ ಆಗಿದೆ ಎಂದು ಹೇಳುವಕಾರಣ ಜ್ಞಾನದಿಂದ ಶಿವರೂಪ
ವಾದ ಜಗತ್ತಿನ ಬಾಧೆಯಾಗಲಾರದು. ಆದರೆ ಕೊಡುವವನೂ ಭೋಗಿಸುವವನೂ ಸರ್ವಪ್ರ
ಪಂಚಸ್ವರೂಪನೂ ಶಿವನೇ ಆಗಿರುವನು. ಆ ಶಿವನೇ ನಾನು ಎಂಬುವ ಶಿವಾದ್ವೈತಜ್ಞಾನದಿಂದ
ಘಟಾದಿಗಳಲ್ಲಿ ಘಟತ್ವಾದಿ ಭೇದ ಬುದ್ಧಿಯು ನಿವೃತ್ತಿಯನ್ನು ಹೊಂದುತ್ತದೆ. ಘಟಾದಿಗಳು
ಶಿವರೂಪವಾಗಿಯೇ ಇರುವವು. ಅದ್ದರಿಂದ ಅವುಗಳ ನಿವೃತ್ತಿಯಾಗುವದಿಲ್ಲ. ಅದ್ದರಿಂದ ಬ್ರಹ್ಮ
ಜ್ಞಾನದಿಂದ ಪ್ರಪಂಚಕ್ಕೆ ಬಾಧೆಯಿಲ್ಲವು. ಮಿಥ್ಯಾವಾದಿಯೇ? ಜನಕಾದಿ ಬ್ರಹ್ಮಜ್ಞಾನಿಗೆ

ಪುರೋವರ್ತಿಯಕ್ಷಂ ಪೂಜಾರ್ಹಂ ಪವಿತ್ರತಮಂ ಮಂಗಲಮೂರ್ತ್ಯಾತ್ಮಕ ಮಿತಿ ನಚತಸ್ಯದೃಶ್ಯತ್ವೇನಸವೈತಥ್ಯಂ ಸ್ವಪ್ನವತ್ | ಬ್ರಹ್ಮಣೋಽಪಿವೈತಥ್ಯಾಪತ್ತೇಃ ಯಕ್ಷಸ್ಯದೃಶ್ಯಸ್ಯ ಬ್ರಹ್ಮತ್ವಸ್ಯವಕ್ಷ್ಯಪ್ರಮಾಣತ್ವಾತ್ | ಕಿಂಚದೃಷ್ಟಾಂತಾಸಿದ್ಧೇಃ ಜಾಗ್ರತ್ಪ್ರಪಂಚಸ್ಯ ವೈಲಕ್ಷಣ್ಯಾತ್ | ಕಿನ್ನಾಮಮಿಥ್ಯಾತ್ವಂ ಬ್ರಹ್ಮಜ್ಞಾನಬಾಧ್ಯತ್ವಂವಾ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವಂವಾ | ನಾದ್ಯಃ ಬಾಧ್ಯಬಾಧಕಭಾವಸ್ಯೈವಾಸಂಭವಾತ್ | "ಸರ್ವೋವೈರುದ್ರಃ" "ಸರ್ವಂ ಖಲ್ವಿದಂಬ್ರಹ್ಮ" ಇತ್ಯಾದೌ ಪ್ರಪಂಚಸ್ಯ ಶಿವಾತ್ಮಕತ್ವೋಪದೇಶಾತ್ ಶಿವೋ ದಾತಾ ಶಿವೋಭೋಕ್ತಾ ಶಿವಃ ಸರ್ವಮಿದಂಜಗತ್ || ಇತ್ಯುಕ್ತ ಶಿವಾದ್ವೈತ

---

ಆಲ್ಲಿಯೂ ಪ್ರಪಂಚವ್ಯವಹಾರವು ಕಂಡುಬರುತ್ತದಲ್ಲವೆ? ಬ್ರಹ್ಮಜ್ಞಾನದಿಂದ ಪ್ರಪಂಚಕ್ಕೆ ಬಾಧೆಯನ್ನು ಹೇಳಿದರೆ ಜೀವನ್ಮುಕ್ತರಿಗೆ ಶರೀರಧಾರಣಾದಿ ಪ್ರಪಂಚವ್ಯವಹಾರವೇ ಯುಕ್ತವಾಗಲಾರದು. ಈ ವಿಷಯದಲ್ಲಿ ಅಖಂಡಾದ್ವೈತ ಭಾನವಾಗಲು ಸರ್ವವು ಬ್ರಹ್ಮಸ್ವರೂಪವಲ್ಲದೆ ಬೇರೆಯಲ್ಲವು ಜ್ಞಾನದಿಂದ ವಿಕಲ್ಪಬುದ್ಧಿಯ ಲಯವಾಗುತ್ತದೆ ಸ್ವರೂಪತಃ ನಾಶವೇ ಆಗುವದಿಲ್ಲವೆಂಬ ವಾಕ್ಯವು ಪ್ರಮಾಣವಾಗಿದೆ. ಮೂರುಕಾಲಗಳಲ್ಲಿಲ್ಲದ್ದು ಮಿಥ್ಯೆಯೆಂದರೆ "ಅಮೂಲಘನಾಧಾರಂ" ಎಂಬುವ ಶ್ರುತಿಯಿಂದ ಜಗತ್ತು ಅನಾದಿಯೆಂದು ಕಂಡುಬರುವಕಾರಣ ಜಗತ್ತಿಗೆ ತ್ರೈಕಾಲಿಕನಿಷೇಧವನ್ನು ಹೇಳಲಿಕ್ಕಾಗುವದಿಲ್ಲವು. ಇದಲ್ಲದೆ ತ್ರೈಕಾಲಿಕನಿಷೇಧವೆಂದರೆ ನೈಯಾಯಿಕನು ಸ್ವೀಕರಿಸಿದ ನಾಲ್ಕು ಅಭಾವಗಳ ಪೈಕಿ ಪ್ರಾಗಭಾವವೋ? ಧ್ವಂಸವೋ? ಅತ್ಯಂತಾಭಾವವೋ? ಅಥವಾ ಅನ್ಯೋನ್ಯಾಭಾವವೋ? ಜಗತ್ತಿನ ಪ್ರಾಗಭಾವವನ್ನು ಹೇಳಲಿಕ್ಕಾಗುವದಿಲ್ಲಾ "ಅಸದ್ವಾ ಇದಮಗ್ರ ಆಸೀತ್ ತತೋ ವೈಸದಜಾಯತ" ಇವೇ ಮೊದಲಾದ ಶ್ರುತಿಗಳಲ್ಲಿ ಬಾಲ್ಯ ಯೌವ್ವನಗಳಂತೆ ಪ್ರಲಯಕಾಲದಲ್ಲಿ ಪ್ರಪಂಚಕ್ಕೆ ಸೂಕ್ಷ್ಮತೆಯೂ ಸೃಷ್ಟಿಕಾಲದಲ್ಲಿ ಆ ಸೂಕ್ಷ್ಮಪ್ರಪಂಚಕ್ಕೆ ಸ್ಥೂಲತೆಯು ಇರುವುದೆಂದರ್ಥವು ಸಿದ್ಧವಾಗುವದರಿಂದ ಜಗತ್ತಿನ ಪ್ರಾಗಭಾವವೆಂದು ನಿಷೇಧ ಶಬ್ದಕ್ಕೆ ಅರ್ಥಮಾಡಲಾಗುವದಿಲ್ಲವು. ಮತ್ತು ಜಗತ್ತಿನ ನಿಷೇಧವೆಂದರೆ ಧ್ವಂಸವೆಂದೂ ಅರ್ಥಮಾಡುವದಕ್ಕಾಗುವದಿಲ್ಲವು. "ಸದೇವಸೌಮ್ಯೇದಮಗ್ರಆಸೀತ್" ಇವು ಮೊದಲಾದ ಶ್ರುತಿಗಳಲ್ಲಿ ಪ್ರಲಯದಲ್ಲಿಯೂ ಕೂಡ ಪ್ರಪಂಚದ ಸ್ಥಿತಿಯು ಕಂಡುಬರುವಕಾರಣ ನಿಷೇಧಶಬ್ದಕ್ಕೆ ಧ್ವಂಸವೆಂದು ಅರ್ಥಮಾಡುವದು ಯುಕ್ತವಲ್ಲವು. ಇನ್ನು ನಿಷೇಧವೆಂದರೆ ಅತ್ಯಂತಾಭಾವವೆಂದು ಹೇಳಲಿಕ್ಕೂ ಆಗುವದಿಲ್ಲವು. ಪ್ರಪಂಚದಲ್ಲಿ ಅರ್ಥಸಿದ್ಧಿಗಳೂ ಕ್ರಿಯಾಸಿದ್ಧಿಗಳೂ ಪ್ರತ್ಯಕ್ಷತಃ ಕಂಡುಬರುವದರಿಂದ ಪ್ರಪಂಚಕ್ಕೆ ಅತ್ಯಂತಾಭಾವವನ್ನು ಹೇಳಲಾಗುವದಿಲ್ಲವು. ಪ್ರಪಂಚಕ್ಕೆ ಭೇದರೂಪವಾದ ನಿಷೇಧವನ್ನೂ ಕೂಡ ಹೇಳಲಾಗುವದಿಲ್ಲವು. "ಸರ್ವಂ ಖಲ್ವಿದಂ ಬ್ರಹ್ಮ" ಎಂದು ಮೊದಲಾದ ಶ್ರುತಿಗಳಿಂದಲೂ 'ತದನನ್ಯತ್ವಮಾರಂಭಣ ಶಬ್ದಾದಿಭ್ಯಃ' ಎಂಬುವ ಬ್ರಹ್ಮಸೂತ್ರದಿಂದಲೂ ಜಗತ್ತಿನ ಅಭೇದವೇ ಸ್ಪಷ್ಟವಾಗಿ ಹೇಳಲ್ಪಟ್ಟಿರುವಕಾರಣ ನಿಷೇಧವೆಂದರೆ ಪ್ರಪಂಚದ ಭೇದವೆಂದರ್ಥವನ್ನು ಮಾಡ್ಳ

ಜ್ಞಾನೇನ ಘಟಪಟಾದೌ ಘಟತ್ವಾದಿಬುದ್ಧಿರ್ನಿವರ್ತತೇ ನತು ಘಟಾದಿಃ, ತಸ್ಯಾಶಿ
ವರೂಪತ್ವಾತ್, ತಸ್ಮಾನ್ನ ಬ್ರಹ್ಮಜ್ಞಾನೇನ ಪ್ರಪಂಚಬಾಧಃ | ಜನಕಾದಿಬ್ರಹ್ಮ
ವಿದಾಮಪಿ ಪೂರ್ವವದ್ವ್ಯವಹಾರಸ್ಯ ದೃಶ್ಯಮಾನತ್ವಾತ್ ಕಿಂಚಜೀವನ್ಮುಕ್ತಾ
ನಾಂ ಶರೀರಧಾರಣಾದಿ ವ್ಯವಹಾರಾನುಪಪತ್ತಿಃ ಸ್ಯಾತ್ | ಉಕ್ತಂಚ „ಅಖಂ
ಡಾದ್ವೈತಭಾನೇತು ಸರ್ವಂಬ್ರಹ್ಮೈವನಾನ್ಯಥಾ | ಜ್ಞಾನಾದ್ವಿಕಲ್ಪಬುದ್ಧಿಸ್ತು
ಲೀಯತೇನ ಸ್ವರೂಪತಃ „ಸದ್ವಿತೀಯಃ„ ಅಮೂಲಘನಾಧಾರಮಿಮಾಃ ಪ್ರ
ಜಾಃಪ್ರಜಾಯಂತೆ ನಕದಾಚಿದನೀದೃಶಂಜಗತ್ | ಇತ್ಯಾದೌ ಜಗತೋ ಅನಾ
ದಿತ್ವಪ್ರತಿಪಾದನಾತ್ | ಕಿಂಚ ತ್ರೈಕಾಲಿಕಾಭಾವಃ ಪ್ರಾಗಭಾವೋವಾಧ್ವಂ
ಸೋವಾ ಅತ್ಯಂತಾಭಾವೋವಾ ಅನ್ಯೋನ್ಯಾಭಾವೋವಾ ನಾದ್ಯಃ „ಅಸ
ದ್ವಾ ಇದಮಗ್ರಆಸೀತ್ ತತೋವೈಸದಜಾಯತ„ ಇತ್ಯಾದಿ ಶ್ರುತಿಷು ಬಾಲ್ಯ
ಯೌವನಾದಿವತ್ ಪ್ರಲಯೇ ಪ್ರಪಂಚಸ್ಯ ಸೂಕ್ಷ್ಮತ್ವಂ ತತ್ಸೂಕ್ಷ್ಮ ಪ್ರಪಂಚ
ಸ್ಯೈವ ಸೃಷ್ಟಿಕಾಲೆ ಸ್ಥೂಲತ್ವವ್ಯಪದೇಶಾತ್ ಸದ್ವಿತೀಯಃ „ಸದೇವಸೌಮ್ಯೇ

---

ವನು ಯುಕ್ತವಲ್ಲವು. ಮತ್ತು ಜಗತ್ತು ಶಿವನಿಗಿಂತಲೂ ಭಿನ್ನವಲ್ಲವೆಂಬುವ ವಿಷಯದಲ್ಲಿ ನೊರೆ
ತೊರೆಬುದ್ಬುದಾದಿ ಆಕಾರಗಳೆಲ್ಲವು ಸಮುದ್ರಕ್ಕಿಂತಲೂ ಭಿನ್ನವಾಗಿಲ್ಲದಂತೆಯೂ ತಂತುಗಳಿಂದ
ಹುಟ್ಟಿದಪಟವು ತಂತುಗಳಿಗೆ ಅಭಿನ್ನವಾಗಿರುವಂತೆಯೂ ಶಿವನಿಂದ ಹುಟ್ಟಿದ ಪ್ರಪಂಚವು ಶಿವನಿಗೆ
ಅಭಿನ್ನವಾಗಿಯೇ ಇರುವದು. ಎಂಬುವ ಶ್ರೀರೇಣುಕ ಭಗವತ್ಪಾದರ ಉಕ್ತಿಯೂ ಪ್ರಮಾಣವಾ
ಗಿದೆಯಾದಕಾರಣ ಆದ್ಯಂತಗಳಲ್ಲಿ ಯಾವದಿಲ್ಲವೋ? ಅದು ವರ್ತಮಾನದಲ್ಲಿಯೂ ಇಲ್ಲದುದರಿಂದ
ಮಿಥ್ಯೆಯೆಂಬ ಪದಾರ್ಥಕ್ಕೆ ಸದೃಶಗಳಾದ ಜಾಗ್ರತ್ಪದಾರ್ಥಗಳು ಸತ್ಯಪದಾರ್ಥಗಳಂತೆ ನೋಡ
ಲ್ಪಡುವವು ಎಂಬ ಗೌಡಪಾದಾಚಾರ್ಯರ ಉಕ್ತಿಯು ಸಿದ್ಧವಾಗುವದಿಲ್ಲವು ಬುದ್ಧಿಯಲ್ಲಿ
ತೋರುವ ಸರ್ವಪದಾರ್ಥಗಳ ಜ್ಞಾನವು ಪಾರಮಾರ್ಥಿಕವೇ ಆಗಿರುವದರಿಂದ ಭ್ರಾಂತಿಯಾದರೂ
ಪಾರಮಾರ್ಥಿಕವೇ ಆಗಿರುವದು. ಯಾಕೆಂದರೆ ಆ ಭ್ರಾಂತಿಗೆ ಕಾರಣಗಳಾದ ಆಯಾಯ ಪದಾ
ರ್ಥಗಳು ಸತ್ಯಗಳಾಗಿರುವವೆಂದಮೇಲೆ ಭ್ರಾಂತಿ ಎಂಬ ಕಾರ್ಯವು ಅಸತ್ಯವಾಗಬಹುದೆ? ಸಮಸ್ತ
ಜ್ಞಾನವು ಸತ್ಯವಾದದ್ದೇ ಇರುವದು ಶುಕ್ತಿರಜತಜ್ಞಾನಕ್ಕೆ ಕಾರಣವು ಚಾಕಚಿಕ್ಯಾದಿ ಸಾದೃ
ಶ್ಯವೂ ಇದು ಸತ್ಯವೇ ಆಗಿದೆ. ಸತ್ಯವಾದಕಾರಣದಿಂದ ಹುಟ್ಟಿದ ಇದು ರಜತವೆಂಬ ಜ್ಞಾನವು
ಸತ್ಯವೇ ಆಗಿದೆ ಆದುದರಿಂದ ಸ್ವಪ್ನಾದಿ ದೃಷ್ಟಾಂತದಿಂದ ಜಾಗ್ರತ್ಪ್ರಪಂಚಕ್ಕೆ ಮಿಥ್ಯಾತ್ವವು
ಸಿದ್ಧಿಸುವದಿಲ್ಲ. ಎಲ್ಲಿ? ಮಿಥ್ಯಾತ್ವವಾದಿಯೇ ? ಯಾವದು ದೃಶ್ಯವೊ ಅದು ಮಿಥ್ಯೆಯೆಂದು
ಸ್ವೀಕರಿಸಿದರೆ ಬ್ರಹ್ಮವೂ ಕೂಡ ಮಿಥ್ಯೆಯಾಗಬೇಕಾಗುವದು. ದೃಶ್ಯವೆಂದರೆ ಜ್ಞಾನವಿಷಯವು
ಬ್ರಹ್ಮಕ್ಕೆ ಜ್ಞಾನವಿಷಯತ್ವವನ್ನಂಗೀಕರಿಸದಿದ್ದರೆ ಬ್ರಹ್ಮಾನುಭೂತಿಯಾಗಲಾರದು. ಇದಲ್ಲದೆ
ಜಗತ್ತು ಮಿಥ್ಯೆಯೆಂದರೆ ಜಗತ್ಪ್ರತಿಪಾದಕ ವೇದಾಂತಾದಿ ಶಾಸ್ತ್ರಗಳೂ ಕೂಡ ಅಸತ್ಯ

ದನುಗ್ರಆಸೀತ್" ಇತ್ಯಾದಿಶ್ರುತಿಷು ನಾಶಃ ಕಾರಣಲಯಃ ಇತಿ ನ್ಯಾಯೇನ
ಪ್ರಲಯೇಪಿ ಪ್ರಪಂಚಸ್ಯ ಸದಾತ್ಮಕತ್ವೇನ ಸ್ಥಿತ್ಯುಪದೇಶಾತ್ ಸತೃತೀಯಃ
ಅರ್ಥಸಿದ್ಧಿಕ್ರಿಯಾಸಿಧ್ಯಾತ್ಮಕತ್ವೇನ ದೃಷ್ಟತ್ವಾತ್. ನ ಚತುರ್ಥಃ "ಸರ್ವಂಖ
ಲ್ವಿದಂಬ್ರಹ್ಮ" "ಸರ್ವೋವೈರುದ್ರಃ" "ವಾಚಾರಂಭಣಂ ವಿಕಾರೋನಾಮಧೇ
ಯಂ ಮೃತ್ತಿಕೇತ್ಯೇವಸತ್ಯಂ" "ತದನನ್ಯತ್ವಮಾರಂಭಣ ಶಬ್ದಾದಿಭ್ಯಃ" ಇತ್ಯಾ
ದಿಶ್ರುತಿ ಸೂತ್ರೈರರ್ಥೇದಸ್ಯೋಕ್ತತ್ವಾತ್ ಉಕ್ತಂಚ ಸಿದ್ಧಾಂತಶಿಖಾಮಣೌ
ರೇಣುಕಭಗವತ್ಪಾದೈಃ | ಫೇನೋರ್ಮಿಬುದ್ಬುಧಾಕಾರಂ ಯಥಾಸಿಂಧೋರ್ನ
ಭಿದ್ಯತೆ || ಯಥಾತಂತುಭಿರುತ್ಪನ್ನಃ ಪಟಸ್ತಂತುಮಯಃಸ್ಮೃತಃ | ತಥಾ ಶಿವಾ
ತ್ಸಮುತ್ಪನ್ನಂ ಶಿವಏವ ಚರಾಚರಮಿತಿ ತಸ್ಮಾತ್ ಆದಾವಂತೇಚಯನ್ನಾಸ್ತಿ
ವರ್ತಮಾನೇಪಿತತ್ತಥಾ | ವಿತಥೈಃ ಸದೃಶಾಃ ಸ್ಸಂತೋವಿತಥಾ ಇವಲಕ್ಷಿ
ತಾಃ || ಇತಿಪರ್ವೈರುಕ್ತಮಯುಕ್ತಮೇವ | ಬುಧ್ಯುಪಸ್ಥಿತ ಸರ್ವಪದಾರ್ಥ
ಜ್ಞಾನಸ್ಯ ಪಾರಮಾರ್ಥಿಕತ್ವಾತ್ | ಭ್ರಾಂತಿಕಾರಣೀಭೂತ ತತ್ತತ್ಪದಾರ್ಥಾ

---

ಗಳೇ ಆಗಿಹೋಗುವವು. ಆದ್ದರಿಂದ ಅಸತ್ಯವಾದ ವೇದದಿಂದ ಶ್ರುತಿಪ್ರತಿಪಾದ್ಯವಾದ ಬ್ರಹ್ಮವು
ಅಸತ್ಯವಾಯಿತು. ವೇದವು ಸತ್ಯವೆಂದರೆ ಅದ್ವೈತಕ್ಕೆ ಹಾನಿಯಾಗುವದು. ಜಗತ್ತು ಮಿಥ್ಯೆಯೆ
ನ್ನುವ ವಿಷಯದಲ್ಲಿ ತೋರಿಸಿದ ದೃಶ್ಯತ್ವ ಹೇತುವು ಬ್ರಹ್ಮದಲ್ಲಿಯೂ ಇರುವದರಿಂದ ಬ್ರಹ್ಮವು
ಪ್ರಪಂಚದಂತೆ ಅಸತ್ಯವಾಯಿತಲ್ಲವೇ ? ಬ್ರಹ್ಮದಲ್ಲಿ ದೃಶ್ಯತ್ವವಿಲ್ಲವೆಂದರೆ ಬ್ರಹ್ಮವು ತತ್ವಮ
ಸ್ಯಾದಿ ವಾಕ್ಯಜನ್ಯವಾದ ಜ್ಞಾನಕ್ಕೆ ವಿಷಯವಾಗಲಾರದು ಆದ್ದರಿಂದ ಬ್ರಹ್ಮಕ್ಕೂ ಕೂಡ
ಮಿಥ್ಯಾತ್ವವು ಪ್ರಾಪ್ತವಾಯಿತು. ವಿನಾಯಕಂ ಪ್ರಕುರ್ವಾಣೋರಚಯಾಮಾಸವಾನರಂ |
ಎಂಬಂತೆ ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸುವ ಭರದಲ್ಲಿ ನೀನೇ ಬ್ರಹ್ಮದಲ್ಲಿ ಮಿಥ್ಯಾತ್ವವನ್ನು
ತಂದಂತಾಯಿತು ಎಲ್ಲಿ ? ಜಗತ್ಸತ್ಯತ್ವವಾದಿಯಾದ ವೀರಶೈವನೇ ? ಬ್ರಹ್ಮದಲ್ಲಿ ಯಾವದೊಂ
ದೂ ಧರ್ಮವಿಲ್ಲದಿರುವದರಿಂದ ದೃಶ್ಯತ್ವ (ಜ್ಞಾನವಿಷಯತ್ವ) ರೂಪವಾದ ಹೇತುವೂ ಕೂಡ
ಪಕ್ಷವಾದ ಬ್ರಹ್ಮದಲ್ಲಿ ಇಲ್ಲವಾದ್ದರಿಂದ ಆ ಹೇತುವಿನಿಂದ ಬ್ರಹ್ಮಕ್ಕೆ ಮಿಥ್ಯಾತ್ವವು ಸಿದ್ಧವಾ
ಗಲಿಲ್ಲವೆಂದರೆ ಮಿಥ್ಯಾತ್ವವಾದಿಯೇ ? ಬ್ರಹ್ಮವು ನಿರ್ಧರ್ಮಕವು ಎಂಬುವ ನನ್ನ ಜ್ಞಾನಕ್ಕಾ
ದರೂ ವಿಷಯವೆಂದು ನೀನು ಒಪ್ಪಿಕೊಳ್ಳಬೇಕಲ್ಲವೆ ? ಈ ನಿನ್ನ ಜ್ಞಾನಕ್ಕೆ ನೇ ಬ್ರಹ್ಮವು ವಿಷ
ಯವಾದ್ದರಿಂದ ಅದು ಮಿಥ್ಯೆಯೆಂದು ಸಿದ್ಧವಾಗುವದಾದುದರಿಂದ ನೀನು ಜಗತ್ತು ಮಿಥ್ಯೆಯ
ನ್ನುವಲ್ಲಿ ತೋರಿಸಿದ ದೃಶ್ಯತ್ವಹೇತುವು ದುಷ್ಟವಾಯಿತು. ಇದಲ್ಲದೇ ನಿನ್ನ ಅನುಮಾನವು ಸತ್ಪ್ರ
ತಿಪಕ್ಷದೋಷದಿಂದ ದೂಷಿತವಾಗುತ್ತದೆ. ಹೇಗೆಂದರೆ ಜಗತ್ತು ಸತ್ಯವಾಗಿದೆ. ಆಮೆಯ ಕಾಲು
ಮೊದಲಾದ ಅವಯವಗಳಂತೆ ಸೃಷ್ಟಿಗಿಂತಲೂ ಪೂರ್ವದಲ್ಲಿ ಜಗತ್ತು ಸಂಕುಚಿತವಾಗಿರುವದರಿಂದ
ಜಗತ್ತು ಮಿಥ್ಯೆಯೆಂದು ಹೇಳುವುದಕ್ಕಾಗದಿಲ್ಲವು. ಆ ಆಮೆಯ ಕಾಲುಗಳು ಒಮ್ಮೊಮ್ಮೆ ಕಾ

ನಾಂ ಸತ್ಯತ್ವಾತ್| ಸರ್ವಂಜ್ಞಾನಂ ಸತ್ಯಮೇವ. ತಥಾಚ ನ ಸ್ವಪ್ನಾದಿದೃಷ್ಟಾಂ ತೇನ ಜಾಗ್ರತ್ಪ್ರಪಂಚಸ್ಯಮಿಥ್ಯಾತ್ವಂ. ಕಿಂಚಬ್ರಹ್ಮಣೋಪಿ ದೃಶ್ಯತ್ವೇನ ಮಿಥ್ಯಾತ್ವಂಸ್ಯಾತ್ | ಅನ್ಯಥಾ ಬ್ರಹ್ಮಾನುಭೂತಿರ್ನಸ್ಯಾತ್ ಕಿಂಚ ಜಗತೊಮಿಥ್ಯಾತ್ವೆ ವೇದಾಂತಾದಿ ಶಾಸ್ತ್ರಸ್ಯಾಪಿ ಮಿಥ್ಯಾತ್ವೇನ ತತ್ಪ್ರತಿಪಾದ್ಯಬ್ರಹ್ಮಣೋಪಿ ಮಿಥ್ಯಾತ್ವಂ ದುರ್ವಾರಂ | ತಥಾಚ ಬ್ರಹ್ಮಮಿಥ್ಯಾಭವಿತುಮರ್ಹತಿ ಅಸತ್ಯಹೇತುಜನ್ಯ ಜ್ಞಾನವಿಷಯತ್ವಾತ್. ಪ್ರಪಂಚವತ್ | ನಚಬ್ರಹ್ಮಣಃನಿರ್ಧರ್ಮಕತ್ವಾತ್, ಪಕ್ಷೇ ದೃಶ್ಯತ್ವರೂಪಹೇತೊರಭಾವಾತ್. ತವಹೇತುರಸಿದ್ಧ ಇತಿವಾಚ್ಯಂ ನಿರ್ಧರ್ಮಕಂ ಬ್ರಹ್ಮೇತಿಜ್ಞಾನಸ್ಯೈವವಿಷಯತ್ವಾತ್. ದೃಶ್ಯತ್ವಂ ಬ್ರಹ್ಮಣಿಪಕ್ಷೇ ಆಯಾತಮನ್ಯಥಾಕಥಮುಚ್ಯತೆ ಬ್ರಹ್ಮನಿರ್ಧರ್ಮಕಮಿತಿ. ತಸ್ಮಾತ್ತ್ವದುಕ್ತಂ ಜಗನ್ಮಿಥ್ಯಾತ್ವಸಾಧಕಂ ದೃಶ್ಯತ್ವಂ ದುಷ್ಟಂ, ಕಿಂಚ ಜಗತ್ಸತ್ಯಂ ಸೃಷ್ಟಿಪ್ರಾಕ್ಕಾಲೆ ಸಂಕುಚಿತತ್ವಾತ್ ಸಂಕುಚಿತ ಕೂರ್ಮಾಂಗವತ್ ಯನ್ನದೃಶ್ಯತೆ ತನ್ನಾಸ್ತೀತಿವಕ್ತುಮಶಕ್ಯತ್ವಾತ್ ಸೃಷ್ಟಿಕಾಲೆಪ್ರತ್ಯಕ್ಷಸಿದ್ಧತ್ವಾತ್ ಸತ್ಯಮೇವ

---

ಣಿಸದಿದ್ದರೆ ಅವು ಅಸತ್ಯಗಳೆಂದು ಹೇಳುವದು ಯುಕ್ತವಲ್ಲವು. ಸೃಷ್ಟಿಗಿಂತಲೂ ಪೂರ್ವದಲ್ಲಿ ಈ ಸ್ಥೂಲಜಗತ್ತು ಸೂಕ್ಷ್ಮರೂಪದಿಂದ ಇದ್ದು ಸೃಷ್ಟಿಯಾದಮೇಲೆ ಪ್ರತ್ಯಕ್ಷತಃ ಜಗತ್ತಿನ ಇರುವಿಕೆಯು ಸಿದ್ಧವಾಗುತ್ತದೆ. ಅಂತ್ಯದಲ್ಲಿಯೂ ಸಂಕುಚಿತ ರೂಪದಿಂದದ್ದಕ್ಕಾರಣ ಮೂರೂಕಾಲಗಳಲ್ಲಿ ಇಲ್ಲದ್ದು ಮಿಥ್ಯೆಯೆಂದು ಅನ್ನುವದು ಅನುಚಿತವು. ಎಲೈ ಸತ್ಯತ್ವವಾದಿಯೇ ? ಸಮಸ್ತ ಪ್ರಪಂಚಮಿಥ್ಯಾಭೂತವಾದ ಮಾಯೆಯಿಂದ ಕಲ್ಪಿತವಾದಕಾರಣ ಪ್ರಪಂಚವು ಮಿಥ್ಯೆಯು. ಕಾರಣವು ಮಿಥ್ಯೆಯಾದುದರಿಂದ ಕಾರ್ಯವು ಮಿಥ್ಯೆಯಾಗಬೇಕಲ್ಲವೇ ? ಎಲೈ ಮಿಥ್ಯಾತ್ವವಾದಿಯೇ ? ''ಮಾಯಾಂತು ಪ್ರಕೃತಿಂ ವಿದ್ಯಾತ'' ''ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೆ'' ಇವೇ ಮೊದಲಾದ ಶ್ರುತಿಗಳಿಂದ ಮಾಯಾ ಪದಾರ್ಥವು ಬ್ರಹ್ಮಶಕ್ತಿಯೆಂದು ಕಂಡುಬರುವಕಾರಣ ಅದು ಮಿಥ್ಯೆಯಲ್ಲವಾದುದರಿಂದ ಜಗತ್ತು ಸತ್ಯವಾದದ್ದೇ. ಈ ವಿಷಯದಲ್ಲಿ ಮಹಾದೇವನಾದ ಶಿವನು ತಾನೇ ತನ್ನ ಇಚ್ಛೆಯಿಂದ ತನ್ನಲ್ಲಿದ್ದ ಪದಾರ್ಥಗಳನ್ನು ತನ್ನ ಸ್ವಾಭಾವಿಕ ಶಕ್ತಿಗಿಂತಲೂ ಮತ್ತೊಂದನ್ನು ಅಪೇಕ್ಷಿಸದೇ ಯೋಗಿಯಂತೆ ಪ್ರಕಾಶಗೊಳಿಸುವನೆಂದು ಕಾಮಿಕಾಗಮವು ಹೇಳುತ್ತದೆ. ಜಗತ್ತು ಮಿಥ್ಯಾಭೂತವಾದ ಮಾಯೆಯಿಂದ ಕಲ್ಪಿತವಾದದ್ದೆಂಬುವ ಮತದಲ್ಲಿ ಈಶ್ವರನೂಕೂಡ ರಜ್ಜುವಿನಲ್ಲಿ ಸರ್ಪದಂತೆ ಕಲ್ಪಿತನಾದುದರಿಂದ ಮಿಥ್ಯಾಭೂತನೆಂದ ಮೇಲೆ ವಿಧಿನಿಷೇಧಬೋಧಕಗಳಾದ ವೇದ ವೇದಾಂತಾದಿ ಶಾಸ್ತ್ರಗಳಿಗೆ ಜಲಾಂಜಲಿಯನ್ನು ಬಿಡಬೇಕಾಗುತ್ತದೆ. ಅದ್ದರಿಂದ ಭಕ್ತಿಶ್ರದ್ಧಾದಿಗಳು ವ್ಯರ್ಥಗಳು ತಾನೇ ಅಸತ್ಯನಾದ ಈಶ್ವರನು ತನ್ನಲ್ಲಿ ಭಕ್ತಿಯನ್ನಿಟ್ಟವರಿಗೆ ಫಲವಂ ಕೊಡಲಾರನು. ಅಸತ್ಯನಾದ ಕಲ್ಪಿತನಾದ ಈಶ್ವರನಲ್ಲಿ ಕೃತ್ರಿಮ ಸಾಲಗ್ರಾಮದಲ್ಲಿ ಹೇಗೊ ಹಾಗೆ ಭಕ್ತಿಶ್ರದ್ಧಾದಿಗಳು ಉದಯಿಸಲಾರವು. ರುಜ್ಜುವಿ

ಅಂತೇಪಿ ಸಂಕುಚಿತರೂಪೇಣ ಸ್ಥಿತತ್ವಾತ್ ಸತ್ಯಂ | ನನುಸರ್ವಸ್ಯಾಪಿ ಮಿಥ್ಯೈಭೂತಮಾಯಾಕಲ್ಪಿತತ್ವಾತ್ ಮಿಥ್ಯೇತಿಚೇನ್ನ "ಮಾಯಾಂತುಪ್ರಕೃತಿಂ ವಿದ್ಯಾತ್ ಮಾಯಿನಂತು ಮಹೇಶ್ವರಂ" "ಪರಾಸ್ಯಶಕ್ತಿರ್ವಿವಿಧೈವಶ್ರೂಯತೆ ಸ್ವಾಭಾವಿಕೀಜ್ಞಾನಬಲಕ್ರಿಯಾಚ" ಇತ್ಯಾದಿ ಶ್ರುತೀಷು ಮಾಯಾಯಾಃ ಬ್ರಹ್ಮಶಕ್ತಿತ್ವೇನಾವಗಮಾತ್ | ಉಕ್ತಂಚ ಕಾಮಿಕಾಗಮೆ || ಶಿವಏವಹಿದೇವೋಂತಃಸ್ಥಿತಮಿಚ್ಛಾವಶಾದ್ಬಹಿಃಯೋಗಿವನಿರುಪಾದಾನಸಮರ್ಥಜಾತಂ ಪ್ರಕಾಶಯೇತ್ || ಇತಿ ಮಿಥ್ಯಾಮಾಯಾಕಲ್ಪಿತಂ ಜಗದಿತಿಮತೆ | ಈಶ್ವರಾದಿಕಂ ರಜ್ಜುಸರ್ಪವತ್ಕಲ್ಪಿತಮಿತಿ ಭಕ್ತಿಶಾಸ್ತ್ರಾಣಾಂ ವಿಧಿನಿಷೇಧ ಬೋಧಕ ವೇದಶಾಸ್ತ್ರಾಗಮಪುರಾಣೇತಿಹಾಸಾನಾಂದತ್ತಾಂಜಲಿಪ್ರಸಂಗಾತ್ | ನಚಾತ್ರಾಪಿ ಭಕ್ತಿಶ್ರದ್ಧಾದೀನಾಂ ದೃಶ್ಯಮಾನತ್ವಾನ್ನವೈಯ್ಯರ್ಥ್ಯಮಿತಿವಾಚ್ಯಂ | ಅಸತಿಕಲ್ಪಿತೆ ಈಶ್ವರೆ ಕೃತ್ರಿಮ ಸಾಲಗ್ರಾಮ ಇವ ಕಸ್ಯವಾಭಕ್ತಿಶ್ರದ್ಧಾದಯೋಭವೇಯುಃ| ರಜ್ವಾವರೋಪಿತಸರ್ಪವತ್ ಕಲ್ಪಿತೇಶ್ವರಃ ಫಲಪ್ರದಾತಾವಾಕಥಂಭವೇತ್ | ತಸ್ಮಾದಿಂ

---

ನಲ್ಲಿ ಆರೋಪಿತವಾದ ಸರ್ಪದಂತೆ ಕಲ್ಪಿತನಾದ ಈಶ್ವರನು ಫಲವನ್ನು ಕೊಡಲಾರನು. ಆದುದರಿಂದಮಿಥ್ಯಾತ್ವವಾದವು ಬೌದ್ಧಚಾರ್ವಾಕಾದಿಗಳ ನಿರೀಶ್ವರವಾದದಂತೆ ಅನಾದರಣೀಯವಾದದ್ದು. ಈ ವಾದವನ್ನು ಯಾವ ಭಾಕ್ತಿಕಮತದವನೂ ಕೂಡ ಅಂಗೀಕರಿಸಲಾರನು. ಆದುದರಿಂದ ಇಂದ್ರಾದಿ ದೇವತೆಗಳ ಅನುಗ್ರಹಕ್ಕೋಸ್ಕರ ಅಭಿವ್ಯಕ್ತವಾದ ಯಕ್ಷನಿಗೆ ದೃಶ್ಯತ್ವವಿದ್ದರೂ ಅದಕ್ಕೆ ಮಿಥ್ಯಾತ್ವವನ್ನು ಹೇಳಕೂಡದು. ಯಾಕಂದರೆ ಸಮಸ್ತ ಪ್ರಪಂಚವೇ ಸತ್ಯವಾಗಿದೆಯಲ್ಲವೇ ? ಸಮಸ್ತ ಪ್ರಪಂಚವೂ ಶಿವರೂಪವಾಗಿರುವದರಿಂದ ಅದಕ್ಕೆ ಮಿಥ್ಯಾತ್ವವನ್ನು ಹೇಳಿದರೆ ಶಿವನಿಗೇನೇ ಮಿಥ್ಯಾತ್ವವನ್ನು ಹೇಳಿದಂತಾಗುವದು. ಎಲೈ ಸತ್ಯತ್ವವಾದಿಯೇ! "ವಾಚಾರಂಭಣಂ ವಿಕಾರೊ ನಾಮಧೇಯಂ ಮೃತ್ತಿಕೇತ್ಯೇವಸತ್ಯಂ" "ನೇಹನಾನಾಸ್ತಿಕಿಂಚನ" ಇವೇ ಮೊದಲಾದ ಶ್ರುತಿಗಳು ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳುತ್ತವೆಯಾದಕಾರಣ ನಿನ್ನ ಸದ್ವಾದವಂಮಾಡುವ ಶ್ರುತಿಗಳಿಗೆ ವಿರುದ್ಧವಾಯಿತು. ಅಂದರೆ ಎಲೈ ಮಿಥ್ಯಾತ್ವವಾದಿಯೇ! ಇವೆರಡು ಶ್ರುತಿಗಳಿಂದಲೂ ಜಗತ್ತಿಗೆ ಮಿಥ್ಯಾತ್ವವು ಸಿದ್ಧಿಸುವದಿಲ್ಲವು ವಾಚಾರಂಭಣಶ್ರುತಿಯು ಜಗತ್ತು ಶಿವನಿಗೆ ಭಿನ್ನವಾಗಿಲ್ಲವೆಂದು ಜಗತ್ತಿನ ಅಭೇದವನ್ನು ಬೋಧಿಸುತ್ತದೆ. ನೇಹನಾನಾ ಎಂಬುವ ಶ್ರುತಿಯು ಸರ್ವಾತ್ಮಕ ಶಿವನೇ ನಾನೆಂಬ ಶಿವಾದ್ವೈತವನ್ನು ಬೋಧಿಸುತ್ತದಲ್ಲದೆ, ಪ್ರಪಂಚದ ಅಸತ್ವವನ್ನು ಹೇಳುವದಿಲ್ಲವು. ಈ ವಿಷಯದಲ್ಲಿ ವಾಚಾರಂಭಣ ವಾಕ್ಯಗಳು ಜಗತ್ತಿಗೆ ಪರಶಿವ ಬ್ರಹ್ಮದ ಅನನ್ಯತ್ವವನ್ನು ಬೋಧಿಸುವದರಿಂದ ಆ ವಾಕ್ಯಗಳು ಜಗತ್ತಿಗೆ ಮಿಥ್ಯಾತ್ವವನ್ನು ಸಮರ್ಥಿಸುವದಿಲ್ಲವು ಯಾಕಂದರೆ ಜಗತ್ತು ಶಿವರೂಪವಾಗಿರುವದು. ಆಪಕಾರಣದಿಂದ ಜಗತ್ತು ಸತ್ಯವೆಂಬ ಪುರಾಣವಾಕ್ಯವು ಪ್ರಮಾಣವಾಗಿರುವದು. ಆದ್ದರಿಂದ ಎಲ್ಲಾ ಭಾವ ಪದಾರ್ಥಗಳು

ದ್ರಾದ್ಯನುಗ್ರಹಾಯಾವಿರ್ಭೂತಸ್ಯ ಯಕ್ಷಸ್ಯ ದೃಶ್ಯತ್ವೇಪಿ ನಮಿಥ್ಯಾತ್ವಂ, ಸರ್ವಸ್ಯಾಪಿ ಪ್ರಪಂಚಸ್ಯ ಸತ್ಯತ್ವಾತ್ | ತಸ್ಯಶಿವರೂಪತ್ವಾತ್ ಅತ ಏವೋಕ್ತಂ, ವಾಚಾರಂಭಣವಾಕ್ಯಾನಿ ತದನನ್ಯತ್ವಬೋಧನಾತ್ | ನಮಿಥ್ಯಾತ್ವಾಯಕಲ್ಪಂತೇಜಗತಃ ಶಿವರೂಪತಃ || ಇತಿ, ಉಕ್ತಂಚಾನ್ಯತ್ರ "ತಸ್ಮಾದ್ಭಾವಾಃ ಸ್ಥಿರಾಃ ಸರ್ವೇನಶ್ಯಂತೇ ಸ್ವರೂಪತಃ | ಇತಿ, ತಸ್ಮಾನ್ನಿಷ್ಕಲಂ ಬ್ರಹ್ಮೈವಾದ್ಭುತಾಕಾರೇಣ ಯಕ್ಷರೂಪೇಣ ಪರಿಣತಮಿತಿಬೋಧ್ಯಂ ||

ಮೂ|| ತೇಽಗ್ನಿಮಬ್ರುವನ್ ಜಾತವೇದ ಏತದ್ವಿಜಾನೀಹಿ | ಕಿಮಿದಂ ಯಕ್ಷಮಿತಿ ತಥೇತಿ ||೧೬||೩||

ತೇ ದೇವಾಃ ಜಾತವೇದ ಏತದ್ಯಕ್ಷಂ ವಿಜಾನೀಹಿ ತ್ಯುಕ್ತವಂತಃ | ತಥಾಸ್ತ್ವಿತಿ ||೧೬|| ||೩||

ಮೂ|| ತದಭ್ಯದ್ರವತ್ ತಮಭ್ಯವದತ್ ಕೋಽಸೀತ್ಯಗ್ನಿರ್ವಾ ಅಹಮಸ್ಮಿ | ಇತ್ಯಬ್ರವೀಜ್ಜಾತವೇದಾವಾ ಅಹಮಸ್ಮೀತಿ ||೧೭||೪||

ಶಾಂ|| ತದ್ಯಕ್ಷಂ ಅಭ್ಯದ್ರವತ್ ಸಮೀಪಂಗತಃ | ತಮಗ್ನಿಮಭ್ಯವದತ್ ಕೋಽಸೀತಿ | ಪೃಷ್ಟೋಽಗ್ನಿರಗ್ನಿರ್ವಾಅಹಮಸ್ಮಿ | ಜಾತವೇದಾವಾ ಅಹಮಸ್ಮೀತಿ ಸ್ವಸ್ಯಪ್ರಸಿದ್ಧನಾಮದ್ವಯಮುಕ್ತವಾನಿತ್ಯರ್ಥಃ ||೧೭||೪||

---

ಸತ್ಯಗಳೇ ಆಗಿರುವದರಿಂದ ಸ್ವರೂಪತಃ ಅವುಗಳಿಗೆ ನಾಶವಿಲ್ಲವೆಂಬುವ ಬೇರೆಯಾದ ಆಪ್ತವಾಕ್ಯವುಕೂಡ ಪ್ರಮಾಣವಾಗಿರುವದು. ಇದಲ್ಲದೆ "ಮಿಥ್ಯಾತ್ವೇಽಸ್ತಿನವಾ ಸಮಸ್ತಜಗತಾಂ ಮಾನಂ ಯದಸ್ತ್ಯೇವಚೇತ್ ತತ್ಸತ್ಯಂ ಯದಿಸಂಭವೇದಭಿಮತಾದ್ವೈತಸ್ಯಹಾನಿಸ್ತತಃ | ಮಿಥ್ಯಾಚೇದ್ಯದಿತನ್ನಸಿದ್ಧ್ಯತಿಜಗನ್ಮಿಥ್ಯಾತ್ವಮೇತತ್ತಥಾ | ಸತ್ಯಂ ಬ್ರಹ್ಮ ತದನ್ಯದೇತದಖಿಲಂ ಮಿಥ್ಯೇತಿವಕ್ತಾ ಜಡಃ || ಎಂದು ಶಿವಾಧಿಕ್ಯ ರತ್ನಾವಳಿಕಾರನೂ ಬ್ರಹ್ಮಸತ್ಯಂ ಜಗನ್ಮಿಥ್ಯಾ ಎಂಬುದಕ್ಕೆ ದೋಷವನ್ನು ಪ್ರಯೋಗಿಸಿರುವನು. ಆದ್ಧರಿಂದ ನಿಷ್ಕಲ ಪರಬ್ರಹ್ಮವೇ ಅದ್ಭುತಾಕಾರವಾಗಿ ಪರಿಣಮಿಸಿತೆಂದು ತಿಳಿಯತಕ್ಕದು.

ಎಲೈ ಅಗ್ನಿಯೇ ! ಈ ಪವಿತ್ರವಾದ ವಸ್ತುವನ್ನು ತಿಳಿದುಕೊಂಡುಬಾ ಎಂದು ಆ ದೇವತೆಗಳು ಹೇಳಿದರು. ಅಗ್ನಿಯು ಹಾಗೆಯೇ ಆಗಲಿ ಎಂದು ಹೇಳಿತು. ಅಗ್ನಿಯು ಆ ಪವಿತ್ರವಾದ ವಸ್ತುವಿನ ಸಮೀಪಕ್ಕೆ ಹೋಗಲಾಗಿ, ಅಗ್ನಿಯನ್ನು ಕುರಿತು ನೀನು ಯಾರೆಂಬದಾಗಿ ಆ ಯಕ್ಷಮೂರ್ತಿಯು ಕೇಳಿತು. ಅದಕ್ಕೆ ಅಗ್ನಿಯು ನನಗೆ ಅಗ್ನಿಯೆಂತಲೂ,

ಮೂ॥ ತಸ್ಮಿನ್ಸ್ತ್ವಯಿಕಿಂವೀರ್ಯಮಿತ್ಯಪೀದ೦ ಸರ್ವಂ ದಹೇಯಂ । ಯದಿದಂ ಪೃಥಿವ್ಯಾಮಿತಿ ॥೧೪॥೫॥

ಶಾಂ॥ ತಸ್ಮಿನ್ ತನ್ನಾಮನಿ ತ್ವಯಿ ಕಿಂವೀರ್ಯಂ ಸಾಮರ್ಥ್ಯಮಿತಿಪೃಷ್ಟೋಽಗ್ನಿಃ । ಯದಿದಂಪೃಥಿವ್ಯಾಂವರ್ತತೇ ತದಿದಂ ಸರ್ವಂದಹೇಯಂ ಭಸ್ಮೀಕುರ್ಯಾಮಿತಿ ಸರ್ವದಹನಸಾಮರ್ಥ್ಯಮಸ್ತೀತ್ಯಬ್ರವೀದಿತ್ಯರ್ಥಃ ॥೧೮॥೫॥

ಅವತರಣಿಕಾ॥ ಅಶಕ್ಯಮನ್ಯೈರ್ಯದನುಗ್ರಹಂವಿನಾ ತೃಣಕ್ಷಯೋಽಪ್ಯತ್ರ ಯಥೇಚ್ಛಯಾಕ್ವಚಿತ್ । ಇತ್ಯುಕ್ತಪ್ರಕಾರೇಣ ಶಿವಪ್ರಸಾದಂವಿನಾ ಬ್ರಹ್ಮವಿಷ್ಣ್ವಾದಯೋದೇವಾ ಅಪಿ ನ ಸೃಷ್ಟ್ಯಾದಿಕರ್ಮಣಿ ಸಮರ್ಥಾಭವಂತಿ। ನಹಿಜಃ ಕಿಮಪಿ ಕರ್ತುಮೀಶತೇ । ಇತ್ಯೇತತ್ಪ್ರದರ್ಶನಾರ್ಥಂ ತಸ್ಮೈತೃಣಂ ನಿದಧಾವಿತ್ಯಾಹ ॥

ಮೂ॥ ತಸ್ಮೈತೃಣಂ ನಿದಧಾವೇತದ್ದಹೇತಿ ತದುಪಪ್ರೇಯಾಯ ಸರ್ವಜವೇನ ತನ್ನಶಶಾಕ ದಗ್ಧುಂ । ಸ ತತಏವ ನಿವವೃತೇ। ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ ॥೧೯॥೬॥

ಶಾಂ॥ ತಸ್ಮೈತಾದೃಶಾಭಿಮಾನವತೇ ತೃಣಮೇತದ್ದಹೇತಿ ತೃಣಂ ತಸ್ಯ ಪುರತೋ ನಿದಧೌ । ತತ್ತೃಣಂ ಸರ್ವಜವೇನ ಉಪಪ್ರೇಯಾಯ ತತ್ಸಮೀಪಂ

---

ಜಾತವೇದಸ್ ಎಂತಲೂ ಪ್ರಸಿದ್ಧಿಗಳಾದ ಎರಡು ನಾಮಗಳಿರುವವೆಂದು ಹೇಳಿತು. ಆಮೇಲೆ ಎಲೈ ಅಗ್ನಿಯೇ ನಿನ್ನಲ್ಲಿ ಸಾಮರ್ಥ್ಯವೇನೆಂದು ಯಕ್ಷಮೂರ್ತಿಯು ಕೇಳಲಾಗಿ, ಈ ಭೂಮಂಡಲದಲ್ಲಿ ಕಾಣುವ ಸಮಸ್ತ ಪದಾರ್ಥಗಳನ್ನು ಏಕಕಾಲದಲ್ಲಿಯೇ ದಹಿಸುವೆನೆಂದು ಅಗ್ನಿಯೇ ಉತ್ತರವನ್ನು ಕೊಟ್ಟಿತು. ಆ ಸರ್ವಸಮರ್ಥನಾದ ಪರಶಿವನ ಅನುಗ್ರಹವು ಇಲ್ಲದಿದ್ದರೆ ಯಾವ ಪ್ರಾಣಿಯಿಂದಲೂ ಒಂದು ಹುಲ್ಲುಕಡ್ಡಿಯನ್ನು ಕೊಯ್ಯುವದಕ್ಕೂ ಅಲ್ಲಾಡಿಸುವದಕ್ಕೂ ಯೋಗ್ಯತೆಯಿಲ್ಲವೆಂದು ಪುರಾಣದಲ್ಲಿ ಹೇಳದ ಪ್ರಕಾರ ಶಿವಾನುಗ್ರಹವಿಲ್ಲದೆ ಬ್ರಹ್ಮ ವಿಷ್ಣ್ವಾದಿ ದೇವತೆಗಳೂ ಕೂಡ ಸೃಷ್ಟಿ ಮೊದಲಾದ ಕಾರ್ಯಗಳನ್ನು ಮಾಡಲು ಸಮರ್ಥರಾಗುವದಿಲ್ಲವು. ಎಂದು ಈಶ್ವರ ಮಾಹಾತ್ಮ್ಯವನ್ನು ತೋರಿಸುವದಕ್ಕಾಗಿ ಈ ಮುಂದಣ ಮಂತ್ರವು ಅಗ್ನಿಯ ಮುಂದೆ ಆ ಯಕ್ಷಮೂರ್ತಿಯು ಹುಲ್ಲುಕಡ್ಡಿಯನ್ನಿಟ್ಟಿತೆಂದು ಹೇಳುತ್ತದೆ. ಸರ್ವಪ್ರಪಂಚವನ್ನೇ ದಹಿಸುವೆನೆಂಬ ಅಭಿಮಾನವುಳ್ಳ ಅಗ್ನಿಯಮುಂದೆ ಆ ಯಕ್ಷಮೂರ್ತಿಯು ಹುಲ್ಲುಕಡ್ಡಿಯನ್ನಿಟ್ಟು ಇದನ್ನು ಸುಡು ಎಂದು ಹೇಳಿತು. ಆಗ ನನ್ನಿಂದ ಈ ಹುಲ್ಲನ್ನು

ಗತವಾನಿತ್ಯರ್ಥಃ | ತತ್ತೃಣಂ ದಗ್ಧುಂ ನಶಶಾಕ | ಸೋಗ್ನಿಃ ತತಏವ ತಸ್ಮಾತ್ ಸ್ಥಾನಾತ್ ನಿವವೃತೇ ದೇವಾನ್ಪ್ರತಿನಿವೃತ್ತಃ | ನಾಹಂಯದೇತದ್ಯಕ್ಷಂ ತದೇತದ್ವಿಜ್ಞಾತುಮಶಕ್ಯಂ | ಇತ್ಯುಕ್ತವಾನಿತಿಶೇಷಃ || ಏವಮಗ್ರೇಪಿ ||೧೯||೬||

ಮೂ|| ಅಥ ವಾಯು ಮಬ್ರುವನ್ ವಾಯವೇತದ್ವಿಜಾನೀಹಿ । ಕಿಮೇತದ್ಯಕ್ಷಮಿತಿ । ತಥೇತಿ ||೨೦|| ತದಭ್ಯದ್ರವತ್ ತದಭ್ಯವದತ್ಕೋಸೀತಿ। ವಾಯುರ್ವಾಹಮಸ್ಮೀತ್ಯಬ್ರವೀನ್ಮಾತರಿಶ್ವಾವಾಹಮಸ್ಮೀತಿ ||೨೧|| ತಸ್ಮಿಂಸ್ತ್ವಯಿಕಿಂ ವೀರ್ಯಮಿತ್ಯಪೀದಂ ಸರ್ವಮಾದದೀಯ ಯದಿದಂ ಪೃಥಿವ್ಯಾಮಿತಿ || ೨೨|| ತಸ್ಮೈತೃಣಂ ನಿದಧಾವೇತದಾದತ್ಸ್ವೇತಿ। ತದುಪಪ್ರೇಯಾಯ ಸರ್ವಜವೇನ ತನ್ನಶಶಾಕ ಆದಾತುಂ । ತತಏವ ನಿವವೃತೇ ನೈತದಶಕ್ಯಂ ವಿಜ್ಞಾತುಂ। ಯದೇತದ್ಯಕ್ಷಮಿತಿ ||೨೩|| ಅಥೇಂದ್ರಮಬ್ರುವನ್ ಮಘವನ್ನೇ ತದ್ವಿಜಾನೀಹಿ ಕಿಮೇತದ್ಯಕ್ಷಮಿತಿ । ತಥೇತಿ । ತದಭ್ಯದ್ರವತ್. ತಸ್ಮಾತ್ತಿರೋದಧೇ ||೨೪||

---

ಸುಡುವದಾಗುವದಿಲ್ಲವೇ ? ನೋಡೋಣ ಎಂದು ವೇಗದಿಂದ ಸಮಿಪಕ್ಕೆ ಹೋಯಿತು. ಆದಾಗ್ಯೂ ಆ ಹುಲ್ಲನ್ನು ಸುಡಲು ಸಾಮರ್ಥ್ಯವಿಲ್ಲದೆ ಹೋಯಿತು. ಆಗ ಅಗ್ನಿಯು ದೇವತೆಗಳ ಹತ್ತಿರ ಬಂದಿತು. ಮತ್ತು ಆ ಪರಬ್ರಹ್ಮಯಕ್ಷಮೂರ್ತಿಯನ್ನು ತಿಳಿಯಲು ನನಗೆ ಸಾಧ್ಯವಿಲ್ಲೆಂದೂ ಹೇಳಿತು. ||೧೯|| ||೬||

ಅನಂತರದಲ್ಲಿ ದೇವತೆಗಳು ವಾಯುವನ್ನು ಕುರಿತು ಎಲೈ ವಾಯುವೇ ಈ ಯಕ್ಷಮೂರ್ತಿಯು ಯಾವದು ಇದರ ಸ್ವರೂಪವನ್ನು ತಿಳಿದುಕೊಂಡು ಬಾ ಎಂದು ಹೇಳಲು, ವಾಯುವು ಆ ಯಕ್ಷಮೂರ್ತಿಯ ಸಮಿಪಕ್ಕೆ ಹೋಯಿತು. ಆಮೇಲೆ ವಾಯುವನ್ನು ಕುರಿತು ಆ ಯಕ್ಷಮೂರ್ತಿಯು ನೀನು ಯಾರು ? ನಿನ್ನಲ್ಲಿ ಸಾಮರ್ಥ್ಯವೇನೆಂದು ಪ್ರಶ್ನೆಮಾಡಲು ನಾನು ವಾಯುವು; ಹಾಗೂ ಮಾತರಿಶ್ವಾ ಎಂಬ ಹೆಸರಿನಿಂದ ಪ್ರಸಿದ್ಧನಿರುವೆನು. ನನ್ನಲ್ಲಿ ಈ ಭೂಮಿಯಲ್ಲಿರುವ ಸರ್ವ ಪದಾರ್ಥಗಳನ್ನು ಹಾರಿಸುವ ಸಾಮರ್ಥ್ಯವಿದೆಂದು ಉತ್ತರವನ್ನು ಕೊಟ್ಟಿತು. ಹಾಗಾದರೆ ಈ ಹುಲ್ಲುಕಡ್ಡಿಯನ್ನು ಹಾರಿಸೆಂದು ಮುಂದೆ ಇಟ್ಟಿತು. ವಾಯುವು ಅತಿವೇಗದಿಂದ ಆ ಹುಲ್ಲುಕಡ್ಡಿಯ ಸಮಿಪಕ್ಕೆ ಬಂದು

ಶಾಂ|| ಅಥೇಂದ್ರಮಿತಿ || ತದಭ್ಯದ್ರವದಿತ್ಯಂತಂ ಪೂರ್ವವತ್ | ತಸ್ಮಾದಿಂದ್ರಾದ್ಯಕ್ಷಸಮೀಪಂಗತಾತ್. ತಿರೋದಧೇ ತಿರೋಹಿತಂ ತದ್ಯಕ್ಷಂ | ಇಂದ್ರಸ್ಯಸ್ವಾಭಿಮಾನಮತ್ಯಂತಂ ನಿರಾಕರ್ತುಂ ತಥಾತಂಧ್ಯಾನಾದೌ ಪ್ರವರ್ತಯಿತುಂ ತೇನಸಹಾಕಂ ನೈವಾಭಾಷತ್ ತಿರೋಹಿತಮೇವಾಭವದಿತ್ಯರ್ಥಃ೨೪||೧೧||

ಅವತರಣಿಕಾ || ಶ್ವೇತಾಶ್ವತರೇ "ಕಿಂ ಕಾರಣಂಬ್ರಹ್ಮ ಕುತಃ ಸ್ಮ ಜಾತಾ ಜೀವಾಮ್ಕೇನ" ಇತ್ಯುಪಕ್ರಮ್ಯ ಕಾಲಾದಿಕಾರಣತ್ವ೯ಾದಿಮತಮಾಕ್ಷಿಪ್ಯ ಧ್ಯಾನವತಾಂ ತೇಷಾಂ ಮುನೀನಾಂಮಧ್ಯೇ ಪಾಶವಿಚ್ಛೇದನಸಮರ್ಥಾ "ವಿದ್ಯಯಾ ವಿಂದತೇಮೃತಂ" ಇತ್ಯತ್ರೋಕ್ತವಿದ್ಯಾರೂಪಾ ಪರಶಿವಾವಿಭಕ್ತಾಚಿಚ್ಛಕ್ತಿರ್ಯಥಾ ತೇಷಾಮನುಗ್ರಹಾಯಾವಿರ್ಭೂತಾಸತೀ ಶಕ್ತಿಮಂತಂ ಶಿವಮುವಾಚ | ಉಕ್ತಂಚ ಶಿವಪುರಾಣೇ ಮುಮುಕ್ಷಯಾ ಪುರಾಕೇಚಿನ್ಮುನಯೋ ಬ್ರಹ್ಮವಾದಿನಃ | ಸಂಶಯಾವಿಷ್ಟಮನಸೋ ಮೃಶಂತಿ ಯಥಾಯಥಂ || ಕಿಂ ಕಾರಣಂ ಕುತೋಜಾತಾ ಜೀವಾಮಃ ಕೇನವಾವಯಂ | ಕೇನವರ್ತಾಮಹೇ ಶಶ್ವತ್ಸುಖೇಷ್ವನ್ಯೇಷುಚಾಪ್ಯಮೀ || ಇತಿತರ್ಕಯಂತಃ—ತೇಧ್ಯಾನಯೋಗಾ

---

ಅವನ್ನು ಎತ್ತಲು ಸಮರ್ಥ್ಯವಾಗದೆ ಮುಖಭಂಗಿತವಾಗಿ ಪುನಃ ಹಿಂದಕ್ಕೆ ಹೊರಟುಹೋಯಿತು. ಆಮೇಲೆ ದೇವತೆಗಳು ಎಲೋ ಇಂದ್ರನೇ ನೀನಾದರೂ ಈ ಯಕ್ಷಮೂರ್ತಿಯನ್ನು ತಿಳಿದುಕೊಂಡು ಬಾ ಎಂದು ಹೇಳಲು ಆಗಲೆಂದು ಇಂದ್ರನು ಹೊರಟುಹೋದನು. ಇಂದ್ರನು ಯಕ್ಷಮೂರ್ತಿಯಸಮೀಪಕ್ಕೆ ಹೋಗುವಷ್ಟರಲ್ಲಿಯೇ ಆ ಜ್ಯೋತಿರ್ಮಯ ಮೂರ್ತಿಯು ಇವನಿಗೆ ಕಾಣದಂತಾಯಿತು. ಅಂದರೆ ಇಂದ್ರನಿಗೆ ನಾನು ದೇವೇಂದ್ರನೆಂಬ ಅಭಿಮಾನವು ಅತಿಶಯವಾಗಿರುವುದರಿಂದ ಆಗರ್ವವನ್ನು ನಿರಾಕರಿಸುವದಕ್ಕಾಗಿಯೂ ಆ ದೇವೇಂದ್ರನಿಗೆ ತನ್ನ ಧ್ಯಾನಧಾರಣಾದಿಗಳಲ್ಲಿ ಪ್ರವೃತ್ತಿಯನ್ನುಂಟುಮಾಡುವದಕ್ಕಾಗಿಯೂ ಅಗ್ನ್ಯಾದಿದೇವತೆಗಳೊಡನೆ ಸಂಭಾಷಣೆಯ ಮಾಡಿದಂತೆ ಈ ದೇವೇಂದ್ರನೊಡನೆ ಸಂಭಾಷಣವನ್ನು ಕೂಡ ಮಾಡದೆ ಅಂತರ್ಧಾನವನ್ನು ಹೊಂದಿತೆಂಬ ತಾತ್ಪರ್ಯವು ||೨೦||೨೧||೨೨||೨೩||೨೪||

ಈ ಜಗತ್ತಿಗೆ ಬ್ರಹ್ಮವು ಹ್ಯಾಗೆಕಾರಣವು ? ನಾವು ಎಲ್ಲಿಂದ ಜನಿಸಿದೆವು ? ನಾವು ಯಾವವಸ್ತುವಿನಿಂದ ಬದ್ಧುಕುತ್ತೇವೆ? ಇವೇ ಮೊದಲಾದ ಶ್ವೇತಾಶ್ವತರೋಪನಿಷತ್ತಿನ ವಾಕ್ಯಮೊದಲ್ಗೊಂಡು ಮುಂದಣ ವಾಕ್ಯಗಳಿಂದ ಕಾಲಾದಿಗಳಿಗೆ ಕಾರಣತ್ವವಂ ಹೇಳುವವರ ಮತವನ್ನು ಆಕ್ಷೇಪಿಸಿಕೊಂಡು ಯಾವದೊಂದು ನಿರ್ಣಯವಾಗದಿರುವ ಕಾರಣ ಆ ಮುನಿಗಳು ಪರಶಿವಧ್ಯಾನಾಸಕ್ತರಾಗಿರಲು ಪಾಶಗಳನ್ನು ನಾಶಮಾಡುವದರಲ್ಲಿ ಸಮರ್ಥವಾಗಿಯೂ "ವಿದ್ಯಯಾ ವಿಂದತೇಮೃತಂ" ಎಂದು ಹಿಂದಣಮಂತ್ರದಲ್ಲಿ ಹೇಳಲ್ಪಟ್ಟ ವಿದ್ಯಾರೂಪವಾಗಿಯೂ ಪರಶಿವನಲ್ಲಿ ಅವಿನಾಭಾವ ಸಂಬಂಧದಿಂದ ಇರುವದಾಗಿಯೂ ಇರುವ ಚಿಚ್ಛಕ್ತಿಯು ಆ ಮುನಿಗಳನ್ನು

ಸುಗತಾಃ ಪ್ರಾಪಶ್ಯನ್ ಶಕ್ತಿಮೈಶ್ವರೀಂ | ಪಾಶವಿಚ್ಛೇದಿಕಾಂದೇವೀಂ ನಿಗೂಢಾಂ ಸ್ವಗುಣೈರ್ಭೃಶಂ || ತತೋಽವಿಚ್ಛಿನ್ನಪಾಶಾಸ್ತೇ ಸರ್ವಕಾರಣಕಾರಣಂ | ಶಕ್ತಿಮಂತಂ ಮಹಾದೇವಮಪಶ್ಯನ್ ದಿವ್ಯಚಕ್ಷುಷಾ || ಇತಿ, ತಥೈವದೇಹಾದ್ಯಭಿಮಾನಂ ತ್ಯಕ್ತ್ವಾ ಯಕ್ಷಧ್ಯಾನಮಗ್ನಸ್ಯ ಭಕ್ತಸ್ಯ ಶುದ್ಧಾತ್ಮನ ಇಂದ್ರಸ್ಯಾನುಗ್ರಹಾರ್ಥಂ ಶ್ರೀಮಹಾದೇವೀ ಭಗವತೀ ಚಿಚ್ಛಕ್ತಿರೇವ ಸ್ಥೂಲಂ ಪಾರ್ವತೀರೂಪಂ ಸ್ವೀಕೃತವತೀ | ತಾಂಚೇಂದ್ರಃ ಪಪ್ರಚ್ಛೇತ್ಯಾಹ | ಸತಸ್ಮಿನ್ನೇವೇತಿ ||

ಮೂ|| ಸ ತಸ್ಮಿನ್ನೇವಾಕಾಶೇ ಸ್ತ್ರಿಯಮಾಜಗಾಮ| ಬಹುಶೋಭಮಾನಾಮುಮಾಂ ಹೈಮವತೀಂತಾಂ ಹೋವಾಚ ಕಿಮೇತದ್ಯಕ್ಷಮಿತಿ ||೨೫||೧೨|| ಇತಿ ತೃತೀಯಃಖಂಡಃ.

ಶಾಂ|| ಸ ಇಂದ್ರಃ ತಸ್ಮಿನ್ನೇವಾಕಾಶೇ ಯಸ್ಮಿನ್ನಾಕಾಶಪ್ರದೇಶೇ ಪರಶಿವಬ್ರಹ್ಮ ಸ್ವಸ್ಯಶಿವಾಂತರ್ಧಾನಮದರ್ಶಯತ್ ಗೋಪಿತಸ್ವರೂಪಂಚಾಭವತ್ |

---

ಅನುಗ್ರಹಿಸುವದಕ್ಕಾಗಿ ಅವರ ಮಧ್ಯದಲ್ಲಿ ಆವಿರ್ಭವಿಸಿ ಶಕ್ತಿಸಹಿತನಾದ ಪರಶಿವನೇ ಜಗತ್ಸೃಷ್ಟ್ಯಾದಿಗಳಿಗೆ ಮುಖ್ಯಕಾರಣನೆಂದು ಉಪದೇಶಿಸಿದಳು. ಈ ವಿಷಯದಲ್ಲಿ ಪೂರ್ವದಲ್ಲಿ ಬ್ರಹ್ಮವಾದಿಗಳಾದ ಮುನಿಗಳು ಮೋಕ್ಷೇಚ್ಛೆಯಿಂದ ಬ್ರಹ್ಮತತ್ವವನ್ನು ತಿಳಿಯಲಾರದೆ ಸಂಶಯಗ್ರಸ್ತ ಮನಸ್ಕರಾಗಿ ಜಗತ್ತಿಗೆ ಕಾರಣವಾವುದು? ನಾವು ಎಲ್ಲಿಂದ ಜನಿಸಿದೆವು? ಯಾವದರಿಂದ ಜೀವಿಸುತ್ತೇವೆಂದು ಊಹಿಸುವವರಾಗಿ ಧ್ಯಾನಯೋಗದಲ್ಲಿ ಆಸಕ್ತರಾಗಲು ಈಶ್ವರಸಂಬಂಧಿಯಾದ ಪಾಶವಿಚ್ಛೇದನ ಸಮರ್ಥವಾದ ಸ್ವಗುಣಗಳಿಂದ ಆಚ್ಛಾದಿತವಾದ ದಿವ್ಯಶಕ್ತಿಯನ್ನು ನೋಡಿದರು. ಆವಿರ್ಭೂತವಾದ ದಿವ್ಯಶಕ್ತಿಯೊಡನೆ ವಿಚಾರಮಾಡಲು ಜ್ಞಾನೋದಯವಾಗಿ ತಮ್ಮ ಪಾಶಗಳನ್ನು ಕಳೆದುಕೊಂಡು ಸರ್ವಪ್ರಪಂಚಕ್ಕೆ ಕಾರಣರಾದ ಬ್ರಹ್ಮವಿಷ್ಣ್ವಾದಿಗಳಿಗೆ ಕಾರಣನಾದ ಶಕ್ತಿವಿಶಿಷ್ಟನಾದ ಮಹಾದೇವನನ್ನು ತಮ್ಮ ದಿವ್ಯದೃಷ್ಟಿಯಿಂದ ಸಾಕ್ಷಾತ್ಕರಿಸಿದರು. ಎಂಬುವ ಶಿವಪುರಾಣವಾಕ್ಯವು ಪ್ರಮಾಣವಾಗಿದೆ. ಅದೇ ರೀತಿಯಂತೆ ದೇಹಾದ್ಯಭಿಮಾನವನ್ನು ಬಿಟ್ಟು ಯಕ್ಷಧ್ಯಾನಾಸಕ್ತನೂ ಶುದ್ಧಾತ್ಮನೂ ಭಕ್ತನೂ ಆದ ಇಂದ್ರನ ಅನುಗ್ರಹಕ್ಕಾಗಿ ಶ್ರೀ ಭಗವತೀ ಮಹಾದೇವಿಯಾದ ಚಿಚ್ಛಕ್ತಿಯೇ ಸ್ಥೂಲವಾದ ಪಾರ್ವತೀರೂಪವನ್ನು ಸ್ವೀಕರಿಸಿ ಇಂದ್ರನಿಗೆ ದರ್ಶನಕೊಟ್ಟಳು. ಇಂದ್ರನು ಆ ಮಹಾದೇವಿಯನ್ನು ಕೇಳಿದನೆಂಬದಾಗಿ "ಸತಸ್ಮಿನ್ನೇ ... ...ವ ಮಂತ್ರವು ಹೇಳುತ್ತದೆ.

ತಸ್ಮಿನ್ನೇವಸ್ತ್ರಿಯಂ ಬಹುಶೋಭಮಾನಾಂ ಶೋಭನತಮಾಂ ತಾಂ ವಿದ್ಯಾಸ್ವ ರೂಪಿಣೀಂ ಹೈಮವತೀಂ ಹಿಮವತಃಪುತ್ರೀಂ ಉಮಾಂ ಉಮಾಶಬ್ದವಾಚ್ಯಾಂ ಪಾರ್ವತೀಮಾವಿರ್ಭೂತಾಮುವಾಚ ಹ ಶರಣಾಗತಃ ಸನ್ ಆಜಗಾಮ-ಆಗತ ವಾನ್-ತಥಾ ಪ್ರಾರ್ಥಯಾಮಾಸೇತ್ಯರ್ಥಃ | ಕಿಮೇತದ್ಯಕ್ಷಂ ಉಜ್ವಲಾಕಾ ರಂ ಸ್ವರೂಪಂದರ್ಶಯಿತ್ವಾ ತಿರೋಹಿತಂ | ತತ್ಕಿಮಿತಿ ||

ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಜಗದ್ಗುರು ಸಿದ್ಧಲಿಂಗ
ಶಿವಾಚಾರ್ಯಾಸ್ಥಾನ ಪಂಡಿತೇನ ಧರ್ಮರತ್ನಪ್ರಶಸ್ತಿಸಮಲಂ
ಕೃತೇನ ಶ್ರೀ ಶಂಕರಶಾಸ್ತ್ರಿಣಾ ವಿರಚಿತಾ ಕೇನೋಪ
ನಿಷತ್ತೃತೀಯಖಂಡಸ್ಯ ಶಾಂಕರವ್ಯಾಖ್ಯಾ
ಸಮಾಪ್ತಾ.

---

ಶಿವಂ—ಶಿವಂ—ಶಿವಂ—ಭೂಯಾತ್.

ಶ್ರೀಹರಗುರುಚರ ಚರಣಾರ್ಪಿತಾಭವತು.



---

ಆಮೇಲೆ ಯಾವಸ್ಥಲದಲ್ಲಿ ಪರಶಿವಬ್ರಹ್ಮವು ತನ್ನ ಮಂಗಲಮಯವಾದ ಸ್ವರೂಪವನ್ನು ಪ್ರಕಾಶಗೊಳಿಸಿ ಪುನಃ ಆ ಸ್ವರೂಪವನ್ನು ಮುಚ್ಚಿಕೊಂಡಿತೋ? ಅದೇ ಸ್ಥಲದಲ್ಲಿ ಅತ್ಯಂತ ಮಂಗಲಸ್ವರೂಪವಾದ ವಿದ್ಯಾಸ್ವರೂಪಿಣಿಯಾದ ಹಿಮವಂತನ ಪುತ್ರಿಯಾದ ಉಮಾಶಬ್ದವಾಚ್ಯಳಾದ ಪಾರ್ವತೀದೇವಿಯು ಆವಿರ್ಭವಿಸಿ ಇಂದ್ರನಿಗೆ ಕಾಣಿಸಿಕೊಂಡಿತು. ಇಂದ್ರನು ಶರಣಾಗತನಾಗಿ ಎಲೈ ಮಹಾದೇವಿಯೇ ಈ ಪ್ರಜ್ವಲಾಕಾರವುಳ್ಳ ಪೂಜ್ಯವಸ್ತುವು ತನ್ನ ಸ್ವರೂಪವನ್ನು ತೋರಿಸಿ ಅಡಗಿಕೊಂಡಿತು. ಇದೇನೆಂದು ಕೇಳಿದನು.

ಇಂತೆಂಬಲ್ಲಿಗೆ ಪಂಡಿತ ಧರ್ಮರತ್ನ ಶ್ರೀ ಶಂಕರಶಾಸ್ತ್ರಿಗಳಿಂದ ರಚಿತವಾದ ಕೇನೋಪನಿಷ
ತ್ತೃತೀಯಖಂಡದ ಶಾಂಕರೀವ್ಯಾಖ್ಯೆಗೆ ಶಿವಾದ್ವೈತ ವಿಭೂಷಣ ಸಿರಸಿ
ಗುರುಶಾಂತಶಾಸ್ತ್ರಿಗಳಿಂದ ರಚಿಸಲ್ಪಟ್ಟ ಭಾವದರ್ಪಣವು
ಸಮಾಪ್ತವಾದುದು.



ಮೂ|| ಸಾಬ್ರಹ್ಮೇತಿಹೋವಾಚ ಬ್ರಹ್ಮಣೋವಾ ಏತದ್ವಿಜ
ಯೇ | ಮಹೀಯಧ್ವಮಿತಿ ತತೋಹೈವ ವಿದಾಂಚ
ಕಾರ ಬ್ರಹ್ಮೇತಿ ||೨೬||೧||

ಶಾಂ|| ಸಾ ಭಗವತೀ ಪಾರ್ವತೀದೇವೀ| ಇಂದ್ರಸ್ಯಶಕ್ತಿಪಾತಂ ಸಮಾ
ಲೋಕ್ಯ ವಿಶ್ವಾತ್ಮಕಂ ವಿಶ್ವಾಧಿಕಂ ಸರ್ವಶಕ್ತಿಕಂ ಯತ್ಪರಶಿವಲಿಂಗಂ ತದೇವ
ಯುಷ್ಮದ್ದುರಭಿಮಾನಶಮನಾರ್ಥಂ ಯಕ್ಷರೂಪೇಣಾವಿರಾಸೀತ್. ತದ್ಯಕ್ಷಂ
ಬ್ರಹ್ಮೈವೇತಿ ಸರ್ವಕರ್ತೃಕ ಪರಶಿವಬ್ರಹ್ಮೈವ ನತ್ವನ್ಯತ್ ಇತಿ ಹ ಕಿಲ ಉವಾ
ಚ ಬ್ರಹ್ಮಣೋವಾ ಏತದ್ವಿಜಯೇ ಅಸುರಕರ್ಮಕವಿಜಯೆ | ಮಹೀಯಧ್ವಂ
ಯೂಯಮಿತಿ | ತತೋಹೈವ ತತ್ಪಾರ್ವತ್ಯುಪದೇಶಾದೇವ ಬ್ರಹ್ಮೇತಿ ವಿದಾಂ
ಚಕಾರ ||೨೬||೧||

ಮೂ|| ತಸ್ಮಾದ್ವಾ ಏತೇದೇವಾ ಅತಿತರಾಮಿವಾನ್ಯಾಂದೇ
ವಾನ್ ಯದಗ್ನಿರ್ವಾಯುರಿಂದ್ರಸ್ತೇಹ್ಯೇನನ್ನೇದಿ
ಷ್ಠಂ ಪಸ್ಪ್ರಶುಸ್ತೇಹ್ಯೇನತ್ಪ್ರಥಮೋವಿದಾಂಚ
ಕಾರಬ್ರಹ್ಮೇತಿ ||೨೭||೨||

ಶಾಂ|| ತಸ್ಮಾದ್ವಾ ತಸ್ಮಾದೇವಹೇತೋರ್ಯತ್ ಯಸ್ಮಾದಗ್ನಿರ್ವಾಯು
ರಿಂದ್ರಸ್ತೇಹಿದೇವಾ ಏನತ್ಪ್ರಥಮಃ ಪ್ರಥಮಂ ವಿದಾಂಚಕಾರ ವಿದಾಂಚಕ್ರುಃ

---

ಭಗವತೀ ಪಾರ್ವತೀದೇವಿಯು ಇಂದ್ರನ ಶಕ್ತಿಪಾತಚಿನ್ಹಗಳನ್ನು ನೋಡಿ ಎಲೈ ಇಂದ್ರಾ
ದಿಗಳಿರಾ! ವಿಶ್ವಾತ್ಮಕನೂ ವಿಶ್ವಾಧಿಕನೂ ಸರ್ವಶಕ್ತಿಯುಳ್ಳ ಲಿಂಗಮೂರ್ತಿಯೂ ಆದ ಆ ಪರ
ಶಿವನೇ ನಿಮ್ಮಗಳ ದುರಭಿಮಾನವನ್ನು ನಾಶಮಾಡಿ ಅನುಗ್ರಹಿಸಬೇಕೆಂಬುದ್ದೇಶದಿಂದ ಮಂಗಲ
ಮಯವಾದ ಆಕಾರವುಳ್ಳವನಾಗಿ ಆವಿರ್ಭವಿಸಿದನು. ಆ ಯಕ್ಷಮೂರ್ತಿಯು ಸರ್ವಕರ್ತೃವಾದ
ಪರಶಿವಬ್ರಹ್ಮವೆ ಆಗಿದೆ ಅದು ಮತ್ತೊಂದಲ್ಲ ಆ ಸರ್ವಾಂತರ್ಯಾಮಿಯಾದ ಬ್ರಹ್ಮವೇ ಅಸುರ
ರಿಗೆ ಅಪಜಯವನ್ನುಂಟುಮಾಡಿ ನಿಮಗೆ ಜಯವನ್ನುಂಟುಮಾಡಿತು. ಈ ಜಯವು ನಿಮ್ಮಿಂದಲೇ
ಆಯಿತೆಂದು ನೀವು ಗರ್ವಿತರಾದಿರಿ ಎಂದು ಪಾರ್ವತೀದೇವಿಯು ಉಪದೇಶಮಾಡಲು ಆ ಉಪ
ದೇಶದಿಂದಲೇ ಇಂದ್ರನು ಬ್ರಹ್ಮಜ್ಞಾನಿಯಾದನು. ಇಂದ್ರನ ವಾಕ್ಯದಿಂದ ಉಳಿದ ಅಗ್ನಿ ಮೊದ
ಲಾದ ದೇವತೆಗಳು ಬ್ರಹ್ಮಜ್ಞಾನಿಗಳಾದರು. ಆದುದರಿಂದ ಅಗ್ನಿಮೊದಲಾದ ದೇವತೆಗಳು
ಇನ್ನುಳಿದ ದೇವತೆಗಳಗಿಂತಲೂ ಶ್ರೇಷ್ಠರೆನಿಸಿಕೊಂಡರು. ಯಾಕೆಂದರೆ ಇನ್ನುಳಿದ ದೇವತೆಗಳಿಗಿಂತ
ಇಂದ್ರ ಅಗ್ನಿ ವಾಯುದೇವತೆಗಳು ಪ್ರಥಮದಲ್ಲಿ ಬ್ರಹ್ಮವನ್ನು ತಿಳಿದರಷ್ಟೆ? ಅಗ್ನಿ ವಾಯು

ತಸ್ಮಾದೇವೇತಿ ಪೂರ್ವೇಣಸಂಬಂಧಃ ಏತೇದೇವಾ ಅನ್ಯಾನ್ ದೇವಾನ್ ಅತಿ ತರಾಮಿವ ಅತ್ಯಂತಮೇವೋತ್ಕರ್ಷಂ ಪ್ರಾಪ್ತವಂತ ಇತ್ಯರ್ಥಃ ||೨೭||೨||

ಮೂ|| ತಸ್ಮಾದ್ವಾ ಇಂದ್ರೋ ಅತಿತರಾಮಿವಾನ್ಯಾನ್ ದೇ
ವಾನ್ ಸಹ್ಯೇನನ್ನೇದಿಷ್ಠಂ ಪಸ್ಪರ್ಶ ಸಹ್ಯೇನತ್ಪ್ರ
ಥಮೋ ವಿದಾಂಚಕಾರ ಬ್ರಹ್ಮೇತಿ ||೨೮||೩||

ಶಾಂ|| ಯತೋಗ್ನಿವಾಯೂ ವಿದಿತವಂತಾವಿಂದ್ರವಾಕ್ಯಾತ್ ಇಂದ್ರ ಶ್ಚೋಮಾವಾಕ್ಯಾತ್ ಪ್ರಥಮಂ ವಿದಿತವಾನ್ ಅತಿಸಮೀಪಸ್ಥಮದ್ಭುತಾಕಾರಂ ಜ್ಯೋತಿರ್ಮಯಂ ತಸ್ಮಾದ್ಧೇತೋ ರಿಂದ್ರೋನ್ಯಾನ್ ದೇವಾನತಿಶೇತೆ ಏತಾವ ತ್ಪರ್ಯಂತಮುಕ್ತಾಖ್ಯಾಯಿಕಾಮ್ನಾಯಃ ಭಕ್ತಸ್ಥಲಾಚಾರಸಂಪತ್ತಿಂವಿನಾನ ಬ್ರಹ್ಮವಿದ್ಯಾಪ್ರಾಪ್ತಿರಿತಿಪ್ರದರ್ಶನಾರ್ಥಃ. ಸಹಿ ದೇಹಾದ್ಯಭಿಮಾನರಾಹಿತ್ಯ ಪ್ರಾಧಾನ್ಯಲಕ್ಷಣ ಭಕ್ತಸ್ಥಲರಹಿತಸ್ಯ ತದಭಿಮಾನಪೂರ್ವಕ ಕಾಮಕ್ರೋ ಧಾದಿ ಯುಕ್ತಸ್ಯ ಶಿವಾದ್ವೈತ ವಿದ್ಯಾವಿರ್ಭಾವೋಸ್ತಿ | ಅಗ್ನ್ಯಾದೀನಾಂ ಸ್ವ ಕರ್ತೃಕಜಯಾಭಿಮಾನೆ ಭಕ್ತಸ್ಥಲತ್ವಾಭಾವಾತ್ ಯಕ್ಷಮೂರ್ತೇ ರ್ದುರ್ಜ್ಞೇ ಯತ್ವಮುಕ್ತಂ. ಅಭಿಮಾನನಾಶೇಚ ತೇಷಾಂ ಭಕ್ತಸ್ಥಲಾಪನ್ನತ್ವಾತ್ ಬ್ರಹ್ಮ ಜ್ಞಾನಮುಕ್ತಂ ತಸ್ಮಾತ್ ಬ್ರಹ್ಮವಿದ್ಯಾಸಾಧನೀಭೂತ ಭಕ್ತಸ್ಥಲಪ್ರದರ್ಶನಾ ರ್ಥೋಯಮಾಖ್ಯಾಯಿಕಾಮ್ನಾಯಃ ಸಮಾಪ್ತಃ | ಅಗ್ರೇಚ ಭಕ್ತಕರ್ತವ್ಯತಾ ಕಮಂತರ್ಲಿಂಗಧಾರಣಾಪರಪರ್ಯಾಯಮುಪಾಸನಮುಚ್ಯತೆ ||೨೮||೩||

---

ದೇವತೆಗಳು ಇಂದ್ರನ ಉಪದೇಶವಾಕ್ಯದಿಂದ ಬ್ರಹ್ಮವನ್ನು ತಿಳಿದುಕೊಂಡರು. ಇಂದ್ರನಾದರೂ ಉಮಾವಾಕ್ಯದಿಂದ ಮಿಕ್ಕ ದೇವತೆಗಳಿಗಿಂತಲೂ ಪ್ರಥಮದಲ್ಲಿಯೇ ಬ್ರಹ್ಮವನ್ನು ತಿಳಿದು ಕೊಂಡಿದ್ದರಿಂದ್ದ ಇಂದ್ರನು ದೇವೇಂದ್ರನಾದನು. (ಎಲ್ಲಾ ದೇವತೆಗಳಿಗಿಂತಲು ಮಿಗಿಲಾದನು) ಇಲ್ಲಿಯವರೆವಿಗೂ ಹೇಳಲ್ಪಟ್ಟ ಆಖ್ಯಾಯಿಕಾ ಗ್ರಂಥವು ಭಕ್ತಸ್ಥಲಾಚಾರಸಂಪತ್ತಿಯೊಂದಿಲ್ಲ ದಿದ್ದರೆ ಬ್ರಹ್ಮವಿದ್ಯವಿರ್ಭಾವವಿಲ್ಲವೆಂದು ತೋರಿಸುವದಕ್ಕೋಸ್ಕರವೆಂದು ತಿಳಿಯತಕ್ಕದ್ದು. ದೇಹಾದಿ ಅಭಿಮಾನರಹಿತನಾಗಿ ಭಕ್ತನಾಗದಿದ್ದರೆ ಕಾಮಕ್ರೋಧಾದಿಯಿಂದ ಕೂಡಿದ್ದವನಿಗೆ ಶಿವಾದ್ವೈತಜ್ಞಾನವು ಲಭಿಸುವದಿಲ್ಲವು ಅಗ್ನಿ ಮೊದಲಾದ ದೇವತೆಗಳಿಗೆ ಅಭಿಮಾನವಿದ್ದ ಕಾರಣ ಅವರು ಭಕ್ತರಾಗಲಿಲ್ಲವಾದ್ದರಿಂದಲೇ ಅವರಿಗೆ ಯಕ್ಷಮೂರ್ತಿಯು ಬ್ರಹ್ಮವೆಂದು ತಿಳಿಯದೇ ಹೋಯಿತು. ಅವರ ಅಭಿಮಾನನಾಶವಾಗಲು ಭಕ್ತರಾದ ಅವರಿಗೆ ಬ್ರಹ್ಮಜ್ಞಾನವು ಹೇಳಲ್ಪ ಟ್ಟಿತು. ಆದುದರಿಂದ ಈ ಆಖ್ಯಾಯಿಕಾಗ್ರಂಥವು ಬ್ರಹ್ಮಜ್ಞಾನಕ್ಕೆ ಸಾಧನೀಭೂತವಾದ ಭಕ್ತ

ಮೂ|| ತಸ್ಯೈಷಆದೇಶೊ ಯದೇತದ್ವಿದ್ಯುತೋವ್ಯದ್ಯುತ
ದಾ೩ಇತೀನ್ಯಮೀಮಿಷದಾ೩ ಇತ್ಯಧಿದೈವತಂ ||೪||

ಶಾಂ|| ತಸ್ಯ ಸ್ತಂಭಾಕಾರೇಣಾವಿರ್ಭೂತಸ್ಯ ಜ್ಯೋತಿರ್ಮಯಸ್ಯ ಪರಶಿವಬ್ರಹ್ಮಣಃ ಆದೇಶಃ ಉಪಾಸನೋಪದೇಶಃ ಯತ್‌ಯಸ್ಮಾತ್‌ಏತತ್ ಪ್ರಕೃತಂ ಬ್ರಹ್ಮ ವಿದ್ಯುತಃ ತಟಿತಃಪ್ರಸಿದ್ಧಾಯಾಃ ವ್ಯದ್ಯುತದಾ ಪ್ರಕಾಶ ಇವ ಆವಿರ್ಭೂತಂ ಪುನಶ್ಚ ನ್ಯಮೀಮಿಷದಾ ನಿಮೇಷಣಮಿವತಿರೋಹಿತಂ ನ್ಯಮೀಮಿಷತ್ ವ್ಯದ್ಯುತದಿತ್ಯತ್ರ ಪ್ರತ್ಯಯಾರ್ಥೋಽವಿವಕ್ಷಿತಃ ಯಥಾವಿದ್ಯುಪ್ರಕಾಶೋಂಧಕಾರಂದೂರೀಕೃತ್ಯ ಯುಗಪದೇವಸರ್ವತ್ರವ್ಯಾಪ್ತೋಭವತಿ ತಿರೋಹಿತಶ್ಚ ಭವತಿ ತಥೈತದ್ಬ್ರಹ್ಮದೇವಾನಾಂ ಸ್ವಪ್ರಕಾಶಸ್ಯ ದರ್ಶನಾನಂತರಂ ತಿರೋಹಿತಮಭೂತ್ ತಸ್ಮಾದ್ವಿದ್ಯುತ್ಪ್ರಕಾಶ ತತ್ತಿರೋಭಾವಇವಬ್ರಹ್ಮ ಕ್ಷಿಪ್ರಂ ಸೃಷ್ಟ್ಯಾದಿಕಾರಿವರ್ತತಇತಿಜ್ಞಾತ್ವಾ, ಉಪಾಸ್ಯಂ ಏತದುಪಾಸನಂಚಾಂತರ್ಲಿಂಗಧಾರಣಾಪರಪರ್ಯಾಯಮಿತಿ ಬೋಧ್ಯಂ. ಏತದುಪಮಾಸದರ್ಶನಪೂರ್ವಕೋಪಾಸನಂಚ ಅಧಿದೈವತಂ ದೇವತಾವಿಷಯಕಂ ಸರ್ವಾಂತರ್ಯಾಮಿ ಪ್ರಾಣಲಿಂಗಾಪರಪರ್ಯಾಯೇಶ್ವರದೇವತಾವಿಷಯಮಿತ್ಯರ್ಥಃ | ತಮೀಶ್ವರಾಣಾಂಪರಮಂ ಮಹೇಶ್ವರಂ ತಂದೇವತಾನಾಂ ಪರಮಂಚದೈವತಂ | ಪತಿಂಪತೀನಾಂಪ್ರಥಮಂ ಪುರಸ್ತಾತ್ ವಿದಾಮದೇವಂ ಪರಮೇಶಮೀಡ್ಯಂ ಇತ್ಯುಕ್ತೇಃ ||೪||

---

ಸ್ಥಲವನ್ನು ತೋರಿಸುವದಕ್ಕೆಂದು ಕಂಡುಬರುತ್ತದೆ. ಇಲ್ಲಿಗೆ ಭಕ್ತಸ್ಥಲದ ಪ್ರದರ್ಶನವೆಂಬ ಪ್ರಯೋಜನವುಳ್ಳ ಈ ಸಂವಾದವು ಸಮಾಪ್ತವಾಯಿತು. ಇನ್ನುಮೇಲೆ ಅಧಿಕಾರಿಯಾದ ಭಕ್ತನಿಗೆ ಯೋಗ್ಯವಾದ ಅಂತರ್ಲಿಂಗಧಾರಣೆಯು ಅಥವಾ ಉಪಾಸನೆಯು ಹೇಳಲ್ಪಡುತ್ತದೆ. ವಿದ್ಯುತ್ತಿನ (ಮಿಂಚಿನ) ಪ್ರಕಾಶವು ಏಕಕಾಲದಲ್ಲಿ ಸಕಲಾಂಧಕಾರವನ್ನು ದೂರಮಾಡಿ ಯಲ್ಲೆಲ್ಲಿಯೂ ವ್ಯಾಪಿಸಿ ಕ್ಷಿಪ್ರದಲ್ಲಿಯೇ ಅಡಗಿಹೋಗುವಂತೆ ಸ್ತಂಭಾಕಾರವಾಗಿ ಕಾಣಿಸಿಕೊಂಡಿರುವ ಬ್ರಹ್ಮರೂಪವಾದ ಈ ಯಕ್ಷಮೂರ್ತಿಯು ದೇವತೆಗಳಿಗೆ ಕಾಣಿಸಿಕೊಂಡು ಶೀಘ್ರವಾಗಿ ಅಡಗಿಹೋದುದರಿಂದ ಪರಶಿವಬ್ರಹ್ಮವು ಕ್ಷಿಪ್ರವಾಗಿ ಸೃಷ್ಟ್ಯಾದಿ ಕಾರ್ಯಗಳನ್ನು ಮಾಡಬಲ್ಲದೆಂದು ತಿಳಿದು ಅದನ್ನು ಉಪಾಸನೆಯಂ ಮಾಡಬೇಕು. ಈ ಉಪಾಸನೆಗೇನೇ ಅಂತರ್ಲಿಂಗಧಾರಣೆಯನ್ನುವರು. ಇದುವೇ ಅಧಿದೈವತೋಪಸನೆಯು ಸರ್ವಾಂತರ್ಯಾಮಿಯಾದ ಈಶ್ವರನೇ ದೇವತೆಯಾಗಿರುವನೆಂದು ತಿಳಿಯಬೇಕಲ್ಲದೆ ವಿಷ್ಣ್ವಾದಿ ದೇವತಾವಿಷಯಕವಾದುದೆಂದು ತಿಳಿಯಬಾರದು. ಪರಶಿವನಲ್ಲಿಯೇ ಪರದೈವತ್ವವಲ್ಲದೆ ಮಿಕ್ಕ ದೇವತೆಗಳಲ್ಲಿಲ್ಲವು. ಈ ವಿಷಯದಲ್ಲಿ ಈಶ್ವರರುಗಳಿಗೆ ಮಹೇಶ್ವರನೂ ದೇವತೆಗಳಿಗೆ ಪರದೈವನೂ ಪತಿಗಳಿಗೆ ಪತಿಯೂ ಆಗಿರುವ ಪರಶಿವನನ್ನು ತಿಳಿದೆವು ಎಂಬ ವಾಕ್ಯವು ಪ್ರಮಾಣವಾಗಿದೆ ||೪||

ಮೂ॥ಅಥಾಧ್ಯಾತ್ಮಂ ಯದೇತದ್ಗಚ್ಛತೀವ ಚ ಮನೋಽನೇ
ನಚೈತದುಪಸ್ಮರತ್ಯ ಭೀಕ್ಷ್ಣಂ ಸಂಕಲ್ಪಃ॥೩೦॥

ಶಾಂ॥ ಅಥ ಅನಂತರಮಧ್ಯಾತ್ಮಂ ಉಪದೇಶಃ ಉಚ್ಯತೆ ಇತಿಶೇಷಃ। ಅರ್ಥಾತ್ ಆಧ್ಯಾತ್ಮಿಕೋಪದೇಶಃ ಇದಾನೀಮುಚ್ಯತೆ ಇತ್ಯರ್ಥಃ ಮನಃ ಮೇ ವಿಷಯಾಸಕ್ತಂ ಚಿತ್ತಂಗಚ್ಛತೀವ ವಿಷಯದೇಶಂ ಪ್ರತಿ ಯಥಾಗಚ್ಛತಿ ತಥಾನಿರ್ವಿಷಯಂಸತ್ ಯದೇತತ್ ಶ್ರೋತ್ರಸ್ಯಶ್ರೋತ್ರಮಿತ್ಯುಪಕ್ರಮವಾಕ್ಯ ನಿರ್ದಿಷ್ಟಂ ಷಟ್ಸ್ಥಲರೂಪಂಬ್ರಹ್ಮ ತತ್ಪ್ರತಿಚಗಚ್ಛತಿ. ಅವಿನಾಭಾವೇನ ಸಂಬಂಧಂಭವತಿ. ಅನೇನಚ ಮನಸಾಂತು ನಿರ್ವಿಷಯೇಣ ಚಿತಿಶಕ್ತಿರೂಪೇಣ ಏತತ್ ಸ್ವಸ್ವರೂಪಂಬ್ರಹ್ಮ ಉಪಸ್ಮರತಿ। ಸ್ವಕೀಯಸರ್ವಾತ್ಮಕ ಪರಶಿವಬ್ರಹ್ಮಸ್ವರೂಪ ವಿಸ್ಮರಣಮಪಸಾರ್ಯಸರ್ವಾತ್ಮಕಶಿವೋಽಹಮಿತಿ ಪರಶಿವಬ್ರಹ್ಮಸ್ವತಾದಾತ್ಮ್ಯೇನಸ್ಮರತಿ ಅಭೀಕ್ಷ್ಣಂ ಪೌನಃಪುನ್ಯೇನ ಸರ್ವಾತ್ಮಶಿವೋಽಹಮಸ್ಮೀತಿ ಸಾಧಕ

---

ಇನ್ನುಮೇಲೆ ಆಧ್ಯಾತ್ಮಿಕೋಪದೇಶವು ಹೇಳಲ್ಪಡುತ್ತದೆ. ವಿಷಯಾಸಕ್ತವಾದ ಚಿತ್ತವು ವಿಷಯಗಳಿರುವ ಪ್ರದೇಶಕ್ಕೆ ಹೋಗಿ .ವಿಷಯಾಕಾರವಾಗದಂತೆ ಅಂತರ್ಮುಖವಾಗಿ ಪರಶಿವರೂಪ ಬ್ರಹ್ಮವನ್ನೇ ಹೊಂದಿ ಅಖಂಡವಾದ ಪರಶಿವಬ್ರಹ್ಮಾಕಾರವನ್ನೇ ಹೊಂದುವುದು. ಈ ಮೇರೆಗೆ ಬ್ರಹ್ಮಾಕಾರವಾದ ನಿರ್ವಿಷಯವಾದ ಮನಸ್ಸಿಗೆ ಚಿತಿಶಕ್ತಿಯೆಂದು ಶೈವಶಾಸ್ತ್ರದ ರೂಢಿಯು. ಮನುಷ್ಯನು ತನ್ನ ಮನಸ್ಸನ್ನು ಚಿತಿಶಕ್ತಿರೂಪವನ್ನಾಗಿ ಮಾಡಿಕೊಂಡರೆ ಅದುವೇ ಶಕ್ತಿವಿಕಾಸರೂಪವಾದ ಮೋಕ್ಷವು. ಈ ಮೋಕ್ಷಕ್ಕೆ ಚಿತ್ತವು ನಿರ್ವಿಷಯವಾಗುವದೇ ಕಾರಣವು. ಈ ವಿಷಯದಲ್ಲಿ ಮನಏವ ಮನುಷ್ಯಾಣಾಂ ಕಾರಣಂಬಂಧಮೋಕ್ಷಯೋಃ। ಬಂಧಾಯ ವಿಷಯಾಸಕ್ತಂ ಮುಕ್ತ್ಯೈನಿರ್ವಿಷಯಂ ಸ್ಮೃತಂ ಎಂಬ ವಾಕ್ಯವು ಪ್ರಮಾಣವಾಗಿರುವುದು. ಉಪಾಸಕನು ನಿರ್ವಿಷಯವಾದ ಚಿತ್ತದಿಂದ ತನಗಭಿನ್ನವಾದ ಬ್ರಹ್ಮವನ್ನು ಸ್ಮರಿಸುವನು. ಅಂದರೆ ಸರ್ವಾತ್ಮಕ ಪರಶಿವಬ್ರಹ್ಮವು ನಾನೇ ಎಂಬುವ ತನ್ನ ಸ್ವರೂಪದ ವಿಸ್ಮರಣೆಯನ್ನು ದೂರಮಾಡಿ ಸರ್ವಾತ್ಮಕಶಿವನೇ ನಾನೇಬುದಾಗಿ ತನ್ನ ಸ್ವರೂಪವನ್ನು ಪುನಃ ಪುನಃ ಸ್ಮರಿಸಲು ಸ್ವರೂಪ ಸಾಕ್ಷಾತ್ಕಾರವಂ ಪಡೆಯುವನು. ತನ್ನ ಸ್ವರೂಪವನ್ನು ಪುನಃ ಪುನಃ ಸ್ಮರಿಸುವದಕ್ಕೆ ಸಂಕಲ್ಪವೆಂದು ಹೆಸರು. ಈ ಸಂಕಲ್ಪದಿಂದ ಸ್ವರೂಪ ಸಾಕ್ಷಾತ್ಕಾರವಾಗಿ ಮುಕ್ತನಾಗುವನು. ಈ ಸಾಕ್ಷಾತ್ಕಾರಕ್ಕೆ ಸಾಧನವಾದ ಉಪದೇಶವೇ ಆಧ್ಯಾತ್ಮಿಕೋಪದೇಶವು. ಯಾವ ಪರಶಿವಬ್ರಹ್ಮವು ತನ್ನ ಶಕ್ತಿಯ ಸ್ವಾತಂತ್ರ್ಯದಿಂದ ಷಟ್‌ಸ್ಥಲರೂಪವಾಗಿದೆಯೋ ? ಆ ಪರಶಿವಬ್ರಹ್ಮವೇ ವನವೆಂಬ ಹೆಸರುಳ್ಳದ್ದು. ವನ ಇಷ್ಟಶಬ್ದಗಳು ಒಂದೇ ಅರ್ಥವುಳ್ಳವುಗಳು. ವನಎಂಬ ಧಾತುವು. ಸಂಭಜನ (ಸೇವಾ ಅಥವಾ ಪ್ರಾರ್ಥನಾ) ಎಂಬರ್ಥವುಳ್ಳದ್ದು. ಇಷ್ಟ ಅಂದರೆ ಇಚ್ಛೆಯೆಂಬರ್ಥವು. ಆದುದರಿಂದ ವನ ಅಂದರೂ ಇಷ್ಟವೆಂದರೂ

ಸ್ಯ ಯಾ ಇಚ್ಛಾ ಸಸಂಕಲ್ಪಃ । ಶಿವಾದ್ವೈತಭಾವದಾರ್ಢ್ಯೇಚಸ್ವಾಭಿನ್ನತ್ವೇನ ಪರಶಿವಬ್ರಹ್ಮ ಸಾಕ್ಷಾತ್ಕರೋತೀತಿ । ಏತಾದೃಶಸಾಕ್ಷಾತ್ಕಾರಸಾಧನೋಪದೇಶ ಏವ । ಆಧ್ಯಾತ್ಮಿಕೋಪದೇಶಾ ಇತ್ಯರ್ಥಃ ॥೩೦॥೫॥

ಮೂ॥ ತದ್ಧ ತದ್ವನಂನಾಮತದ್ವನಮಿತ್ಯುಪಾಸಿತವ್ಯಂ । ಸಯಏತದೇವಂ ವೇದಾಭಿಹೈನಂ ಸರ್ವಾಣಿಭೂತಾನಿ ಸಂವಾಂಛಂತಿ ॥೩೧॥

ಶಾಂ॥ ತದ್ಧೇತಿ ಕಿಯತ್ ಸ್ವಶಕ್ತಿಸ್ವಾತಂತ್ರ್ಯೇಣ ಷಟ್ತ್ವಾವಚ್ಛಿನ್ನ ಲಿಂಗರೂಪಸಂಜಾತಂ ತದ್ಧ ಬ್ರಹ್ಮಕಿಲತದ್ವನಂನಾಮಸರ್ವೈಃ ಪೃಥಿವ್ಯಾದ್ಯಾತ್ಮಾಂತಭೂತಾಂಗೈರಂಗಸ್ಥಲೈರ್ವನಸಂ ಪ್ರಾರ್ಥನೀಯಂ । ವನಸಂಭಜನೇ ಇತಿಧಾತೋಃ । ಸರ್ವೈರಂಗಸ್ಥಲೈರ್ವನಸನೀಯತ್ವಾತ್ ಪ್ರಾರ್ಥನಾವಿಷಯತ್ವಾತ್ ಪ್ರಾರ್ಥನಾಚ ಇಚ್ಛಾ ತದ್ವಿಷಯತ್ವಾತ್ । ಅತ್ರವನಪದಂ ಇಷ್ಟಲಿಂಗನಾಮಕಮಿತ್ಯರ್ಥಃ ॥ ಸರ್ವೈರಷ್ಟಾಂಗಸ್ಥಲಾಪನ್ನೈಃ ಸ್ವಸ್ವಸ್ಥೂಲಭೂತಷಟ್ಕಶುದ್ಧಿರೂಪಸಾಮರಸ್ಯಾಯ ಇಷ್ಟಲಿಂಗಗತಾಚಾರಾದಿ ಲಿಂಗಾನಾಂ ಪ್ರಾರ್ಥನೀಯತ್ವಾತ್ ವನನೀಯಸ್ಯವನಸ್ಯೇಷ್ಟಲಿಂಗಸ್ಯೈಕಾರ್ಥ ಕತ್ವಾತ್. ಅಗ್ರೇಸರ್ವಾಣಿ ಭೂ

---

ಒಂದೇ ಅರ್ಥವು. ವೀರಶೈವನು ಸ್ಥೂಲಭೂತಗಳನ್ನು ಸೂಕ್ಷ್ಮಭೂತಗಳನ್ನೂ ಶುದ್ಧಿಮಾಡಿಕೊಳ್ಳದಿದ್ದರೆ ಶಿವಪೂಜಾದಿ ಕರ್ಮಗಳಿಗೆ ಅಧಿಕಾರಿಯೇ ಆಗುವದಿಲ್ಲವಾದುದರಿಂದ ಮೊದಲು ಸ್ಥೂಲಭೂತ ಶುದ್ಧಿ (ಜಯ) ಯನ್ನು ಮಾಡಿಕೊಳ್ಳಬೇಕು. ವೀರಶೈವಗುರುಸಂಪ್ರದಾಯಜ್ಞನಾದ ಗುರುವಿನ ಮುಖದಿಂದ ಷಡುದ್ಧ್ಯಾಶಾದಿ ಏಕಾಂತವಾದ ಪ್ರಯೋಗಗಳಿಂದ ಮೊದಲು ಪೃಥಿವ್ಯಾದಿಗಳ ಗುಣಗಳನ್ನು ಕಳೆದು, (ಆಯಾಯ ಲಿಂಗದಲ್ಲಿ ಲೀನಮಾಡಿ) ಪೃಥಿವೀ ಮೊದಲುಗೊಂಡು ಆತ್ಮಾಂತಗಳಾದ ಸ್ಥೂಲಭೂತಗಳ ಅಂಶಗಳನ್ನು ಇಷ್ಟಲಿಂಗದಲ್ಲಿರುವ ಆರು ಲಿಂಗಗಳಲ್ಲಿ ಲಯಂಗೊಳಿಸಿ ಉಳಿದ ಶುದ್ಧ ಸೂಕ್ಷ್ಮಭೂತಗಳನ್ನು ಅಂಗಗಳನ್ನಾಗಿ ಮಾಡಿಕೊಂಡು ಭಕ್ತಾದಿಸ್ಥಲಗಳನ್ನು ಸಮರಸಂಗೊಳಿಸಲು ಆಗ ಭೂತಗಳು ಜಯವಾಯಿತೆಂದು ತಿಳಿಯಬೇಕು. ಇಂತು ಅಂಗಸ್ಥಲಗಳಿಂದ ಆ ಬ್ರಹ್ಮವು ಪ್ರಾರ್ಥಿಸಲ್ಪಡಲು ಯೋಗ್ಯವಾದುದರಿಂದ ಅದಕ್ಕೆ ವನವೆಂದು ಹೆಸರು (ಇಷ್ಟಲಿಂಗವೆಂದು ಹೆಸರು.) ಈ ಪ್ರಕಾರವಾಗಿ ಸೂಕ್ಷ್ಮ ಸ್ಥೂಲಭೂತಗಳನ್ನು ಶುದ್ಧಿಗೊಳಿಸುವದಕ್ಕಾಗಿ ತನಗೆ ಅಭಿನ್ನವಾಗಿ ಇಷ್ಟಲಿಂಗದಲ್ಲಿ ಸಂಯಮ ಧ್ಯಾನ ಧಾರಣ ಸಮಾಧಿಗಳನ್ನು ಆಚರಿಸಲು ಭೂತಗಳ ಜಯವಾಗುವದು. ಇಷ್ಟಲಿಂಗವು ಭೂತಗಳಿಂದ ಸೇವಿಸಲು ಯೋಗ್ಯವಾದುದೆಂದು ತಿಳಿದು, ಅಲ್ಲಿ ಸಂಯಮವನ್ನು ಮಾಡಲು ಆ ಉಪಾಸಕನಿಗೆ ಭೂತಗಳು ವಶಗಳಾಗಿ ಉಪಾಸಕನ ಇಚ್ಛಾನುಸಾರವಾಗಿರುವವು. ಅವುಗಳಿಗೆ ಉಪಾಸಕನು ಅಧೀನನಾಗದೆ ಅವುಗಳನ್ನೇ ತನ್ನಧೀನದಲ್ಲಿಟ್ಟುಕೊಳ್ಳುವನು. ಅಚೇತನಗಳಾದ ಭೂತಗಳೂ

ತಾನಿ ಸಂಪಾಂಭಂತೀತ್ಯುಕ್ತ್ವಾ ಭೂತಶುದ್ಧಿರೂಪ ಭೂತಜಯಸ್ಯ ವಕ್ಷ್ಯಮಾಣತ್ವಾತ್. ಸ್ಥೂಲಷಡ್ಭೂತಜಯಾಯ. ಸ್ಥೂಲಷಡ್ಲಿಂಗಗರ್ಭೇಷ್ಟಲಿಂಗಸ್ಯೈವ ಸಂಯಮ ಏಕ್ಷಯತ್ವಮಿತಿವಕ್ತುಮೌಚಿತ್ಯಾತ್| ಏತಾವತಾ ಕಿಂ ಜಾತಮಿತಿಚೇತ್ | ತದುಕ್ತಂ ಬ್ರಹ್ಮವನಮಿತಿ ಇಷ್ಟಲಿಂಗರೂಪಮಿತಿ ಜ್ಞಾತ್ವಾ ಉಪಾಸಿತವ್ಯಂ. ಸ್ಥೂಲಭೂತಷಟ್ಕಂ ಸ್ಥೂಲಷಡ್ಲಿಂಗ ಗರ್ಭೇಷ್ಟಲಿಂಗೇ ಸಂಯೋಜನೀಯಂ "ಉಪಾಸನೈವ ಸಂಯೋಗಃ ಸಂಯೋಗೋದ್ವೈತಸಲ್ಲಯಃ" ಇತ್ಯುಕ್ತತ್ವಾತ್ | ಸಂಭಜನೀಯೇಷ್ಟ ಲಿಂಗೋಪಾಸನೆ | ಕಿಂಫಲಮಿತ್ಯತ್ರಾಹ. "ಸಯ ಇತಿ" ಯಃ ಏವಂ ಸರ್ವೈರಂಗೈಃ ಪ್ರಾರ್ಥನೀಯಮಿತಿವೇದ. ಉಪಾಸ್ತೆ ಸ ಏತತ್ ವನಂಭವತಿ. ವನನೀಯೇಷ್ಟಲಿಂಗರೂಪೋಭವತಿ ಕಿ ಂಚೈಸಂಹವನಂಕಿಲೋಪಾಸಕಂ. ಸರ್ವಾಣಿ ಭೂತಾನಿ ಷಟ್ಸಂಖ್ಯಾಕಾನ್ಯಪಿ. ಅಭಿಛಿತಃ ಸರ್ವಪ್ರಕಾರೇಣ ಸಂವಾಂಭಂತಿ ಊಪಾಸಕಸ್ಯೇಚ್ಛಾನುಸಾರೇಣ ಸಮ್ಯಗಿಚ್ಛಂತಿ, ತಸ್ಯವಶವರ್ತಿನೋಭವಂತೀತ್ಯರ್ಥಃ | ಅನೇನಮಂತ್ರೇಣ ಇಷ್ಟಲಿಂಗೋಪಾಸನಮುಕ್ತಮಿತಿವೇದಿತವ್ಯಂ ||೩೧||೬||

ಮೂ|| ಉಪನಿಷದಂಭೋ ಬ್ರೂಹೀತ್ಯುಕ್ತಾತ ಉಪನಿಷದ್ಬ್ರಾಹ್ಮೀಂವಾವ ತ ಉಪನಿಷದಮಬ್ರೂಮೇತಿ ||

---

ಕೂಡ ಉಪಾಸಕನ ಅಜ್ಞಾನುಸಾರವಾಗಿಯೇ ನಡೆಯುವವು. ಪುರಾಣೇತಿಹಾಸಗಳಲ್ಲಿ ಹೇಳಿದ ಕೆಲವು ಅದ್ಭುತ ಕಾರ್ಯಗಳು ಯೋಗದಿಂದ ಸಿದ್ಧಿಸುತ್ತವೆಂದು ಕಂಡುಬರುವದರಿಂದ ಅವುಗಳನ್ನೆಲ್ಲ ಸುಳ್ಳು ಎಂದು ಹೇಳಲಿಕ್ಕೆ ಬರುವದಿಲ್ಲವು. ಆ ಕಾರ್ಯಗಳನ್ನು ಮಾಡಿದವನು ಭೂತಜಯ ಮಾಡಿಕೊಂಡಿದ್ದರೆ ಅವನ ಆಜ್ಞೆಯ ಮೇರೆಗೆ ಅಚೇತನವೂ ಕೂಡ ಮಾತನಾಡಬಹುದು ಹೀಗೆ ಭೂತಜಯವನ್ನು ಪಡೆದುಕೊಂಡ ಶಿವಯೋಗಿಯನ್ನು ಇಚ್ಛಾನುಸಾರವಾಗಿ ಸಮಸ್ತ ಭೂತಗಳೂ ಇಚ್ಛಿಸುತ್ತವೆಂದು ಈ ಮಂತ್ರವು ಹೇಳುವದರಿಂದ ಭೂತಜಯವೂ. ಈ ಭೂತಜಯಕ್ಕಾಗಿ ಇಷ್ಟಲಿಂಗೋಪಾಸನೆಯೂ ಹೇಳಲ್ಪಟ್ಟಿತೆಂದು ತಿಳಿಯತಕ್ಕದ್ದು. ಬಾಲ್ಯದಲ್ಲಿ ನಮಗೆ ಅನೇಕ ಹೇಯಪದಾರ್ಥಗಳು ಆದರಣೀಯಗಳಾಗಿ ಸ್ವಲ್ಪ ಪ್ರೌಢಾವಸ್ಥೆಗೆ ಬರಲು ಆ ಹೇಯ ಪದಾರ್ಥಗಳನ್ನು ತುಚ್ಛೀಕರಿಸಿ, ಅವುಗಳ ಸ್ಮರಣೆಯೂ ಕೂಡ ತಪ್ಪಿಹೋಗುವಂತೆ, ಭೂತಗಳ ಅಹಂಕಾರ ಮಮಕಾರಗಳನ್ನು ಬಿಟ್ಟು ಅವುಗಳನ್ನು ತುಚ್ಛೀಕರಿಸಿ ಅವುಗಳನ್ನು ಮರೆತು ಇಷ್ಟಲಿಂಗವೇ ನಾನು ಎಂದು ಜ್ಞಾನವು ದೃಢವಾಗಲು ಭೂತಜಯವೆಂದು ತಿಳಿಯಬೇಕೆಂಬುವದೇ ಶಾಂಕರೀಕಾರನ ತಾತ್ಪರ್ಯವು. ||೩೧||೬||

"ಆತ್ಮನಾವಿಂದತೇವೀರ್ಯಂ" ಎಂಬಲ್ಲಿ ವಿದ್ಯಾರೂಪವಾದ ವೀರ್ಯಪ್ರಾಪ್ತಿಯು ಆತ್ಮಶುದ್ಧಿಯಿಂದ ಆಗುತ್ತದೆಂದು ಹೇಳಲ್ಪಟ್ಟಿತು. ಆದುದರಿಂದ ಉಪನಿಷತ್ತನ್ನು ಹೇಳು ಎಂದು

ಶಾಂ|| ಆತ್ಮನಾವಿಂದತೇ ವೀರ್ಯಮಿತ್ಯಸ್ಮಿನ್ ವಿದ್ಯಾರೂಪವೀರ್ಯ ಪ್ರಾಪ್ತಿಃ ಶುದ್ಧಾತ್ಮನಾ ಭವತೀತ್ಯುಕ್ತಂ. ತಸ್ಮಾದುಪನಿಷದಂಭೋ ಬ್ರೂಹೀತಿ ಶಿಷ್ಯೇಣ ಪೃಷ್ಟೋ ಗುರುಃ ಪುನರಾಹ ಉಕ್ತಾತ ಉಪನಿಷದಿತಿ. ಸಾಕ್ಷಾನ್ಮೋಕ್ಷಪ್ರಾಪಕ ವಿದ್ಯಾವೀರ್ಯಾಪರಪರ್ಯಾಯ ಚಿಚ್ಛಕ್ತಿರೂಪೋಪನಿಷದುಕ್ತೈವ ಶೇತುಭ್ಯಂ ಬ್ರಾಹ್ಮೀಂ ಬ್ರಹ್ಮಣಃ ಪರಶಿವಸ್ಯ ಇಯಂ ಚಿಚ್ಛಕ್ತಿರೂಪಾ ತಾಂ ವೀರ್ಯರೂಪಾಮುಪನಿಷದಂ ವಿದ್ಯಾಂ ಯಯಾಸಾಮಿಪ್ಯೇನ ಸಾಮರಸ್ಯಲಕ್ಷಣೇನ ನಿತರಾಂ ಪರಶಿವಬ್ರಹ್ಮಪ್ರಾಪ್ಯ ಕೃತ್ರಿಮಾಹಂಕಾರಾದೀನ್ ಶಿಥಿಲೀಕೃತ್ಯ ಸ್ವಶಕ್ತಿ ಸಂಕೋಚಾಖ್ಯಾತಿಂ ಸಾದಯತ್ಯಪಸಾರಯತಿಶ್ಚೈವ ಇತ್ಯುಪನಿಷತ್ | ತಾಮುಬ್ರೂಮ್ಯೈವ ಉಕ್ತವಂತಏವ ಅತೋನ್ಯಾಮಾತ್ಮಶುಧ್ಯುಪಯಿಕೀಮುಪನಿಷದಂ ವಕ್ಷ್ಯಾಮಃ ಶೃಣ್ವಿತ್ಯರ್ಥಃ ||೩೨||೭||

ಮೂ|| ತಸ್ಯೈತಪೋದಮಃ ಕರ್ಮೇತಿಪ್ರತಿಷ್ಠಾ ' ವೇದಾಃ ಸರ್ವಾಂಗಾನಿ ಸತ್ಯಮಾಯತನಂ ||೩೩||

ಶಾಂ|| ತಸ್ಯೈ ಯಾ ತವಾಗ್ರೆ ವಿದ್ಯಾರೂಪಾ ಉಪನಿಷದುಕ್ತಾ ತಸ್ಯೈ ತಪಃ ಕರ್ಮಜ ..ಶಿವಾರ್ಥೇ ದೇಹಸಂಶೋಷಸ್ತಪಃ ಕೃಚ್ಛ್ರಾದಿನೋಮತಂ |

---

ಶಿಷ್ಯನು ಕೇಳಲಾಗಿ, ವಿದ್ಯಾಸ್ವರೂಪವಾದ ಉಪನಿಷತ್ತನ್ನು ಹಿಂದೆಯೇ ಹೇಳಿದ್ದೇವೆ. ಸಾಕ್ಷಾತ್ಸಂಬಂಧದಿಂದ ಮೋಕ್ಷಕ್ಕೆ ಕಾರಣವಾದ ವಿದ್ಯಾವೀರ್ಯಗಳೆಂದು ಎರಡು ಪರ್ಯಾಯನಾಮಗಳುಳ್ಳ ಚಿಚ್ಛಕ್ತಿರೂಪವಾದ ಉಪನಿಷತ್ತನ್ನು ಹೇಳಿಯೇ ಇರುವೆವು. ಬ್ರಹ್ಮವಿದ್ಯೆಗೆ ಉಪನಿಷತ್ತೆಂದು ಹೆಸರು ಬರಲಿಕ್ಕೆ ಕಾರಣವೇನೆಂದರೆ- ಉಪ ಸಮೀಪದಲ್ಲಿ ಅತ್ಯಂತವಾಗಿ ನಾಶಮಾಡತಕ್ಕದು ಯಾವದುಂಟೋ ಅದು ಉಪನಿಷತ್ತು. ಬ್ರಹ್ಮವಿದ್ಯೆಯು ಸಾಮರಸ್ಯರೂಪವಾದ ಸಾಮೀಪ್ಯದಿಂದ ಸಂಸಾರಕ್ಕೆ ಕಾರಣವಾದ ಅಖ್ಯಾತಿ ಎಂಬ ಮೂಲ ಮಲವನ್ನೇ ನಾಶಮಾಡುತ್ತದಾದ ಕಾರಣ, ಬ್ರಹ್ಮವಿದ್ಯೆಗೆ ಉಪನಿಷತ್ತೆಂದು ಹೆಸರು. ಎಲೈ ಶಿಷ್ಯನೆ! ಇಂಥ ಬ್ರಹ್ಮವಿದ್ಯಾರೂಪವಾದ ಉಪನಿಷತ್ತನ್ನು ನಿನಗೆ ಹೇಳಿದೆನು. ಇನ್ನು ಮೇಲೆ ಈ ವಿದ್ಯೆಗೆ ಸಾಧಕವಾದ ಆತ್ಮಶುದ್ಧಿ ಎಂಬ ಉಪಾಯದಲ್ಲಿ ಅಂತರ್ಗತವಾದ ಉಪನಿಷತ್ತನ್ನು ನಿನಗೆ ಹೇಳುವೆನು ಎಂದು ಶ್ರುತಿಯು ಗುರುರೂಪದಿಂದ ಹೇಳುವುದು. ||೩೨||೭||

ಎಲೈ ಶಿಷ್ಯನೆ! ನಿನಗೆ ಯಾವ ಉಪನಿಷತ್ತು ಹೇಳಲ್ಪಟ್ಟಿತೋ ಇದಕ್ಕೆ ಶಿವಪೂಜೆಗೋಸ್ಕರ ಪೂಜಾದ್ರವ್ಯಗಳನ್ನು ಸಂಪಾದಿಸುವ ವಿಷಯದಲ್ಲಿ ದೇಹಶ್ರಮವೆಂಬ ತಪಸ್ಸು ಶಿವಪೂಜಾಕರ್ಮವು ದಮವೆಂಬುವ ಗುಣವು ಇವುಗಳೇ ಸಾಧನಗಳಾಗುವವಲ್ಲದೆ, ಕೃಚ್ಛ್ರಾದಿ ತಪಸ್ಸು ಬಾಹ್ಯಯಾಗಾದಿಗಳೂ ಸಾಧನಗಳಾಗುವದಿಲ್ಲವು. ಅವು ಕೇವಲಶಿವಭಕ್ತಿಯಗೋಸ್ಕರವಾಗಿ ವೇದಶಾಸ್ತ್ರಗಳಲ್ಲಿ ಹೇಳಲ್ಪಟ್ಟವೆಯಲ್ಲದೆ ಮುಖ್ಯವಾದ ಮೋಕ್ಷಫಲಕ್ಕಾಗಲೀ

ಶಿವಾರ್ಚಾಕರ್ಮ ವಿಜ್ಞೇಯಂ ಬಾಹ್ಯಂ ಯಾಗಾದಿಸೋಚ್ಯತೇ || ಇತ್ಯಾದಿನೋಕ್ತಂ ವೀರಶೈವೈರನಾದರಣೀಯಮಿತಿಜ್ಞೇಯಂ. ನತುಪರ್ಯೈರಭ್ಯುಪಗತಂ ಕೃಚ್ಛ್ರಾದಿ | ಬಹುವಿತ್ತವ್ಯಯಾಯಾಸಸಾಧ್ಯ ಜ್ಯೋತಿಷ್ಟೋಮ ಯಾಗಾದಿಕರ್ಮ | ಅಗ್ನಿಷ್ಟೋಮಾದಯೋಯಜ್ಞಾ ಅಶ್ವಮೇಧಾವಸಾನಕಾಃ | ಸರ್ವೇಪಿ ಶಿವಭಕ್ತ್ಯರ್ಥಂ ಸಿಕ್ಷಿತಾ ವೇದಶಾಸ್ತ್ರಯೋಃ || ಇತ್ಯುಕ್ತೇಸ್ತತ್ಫಲಸ್ಯಾಪಿನಶ್ವರತ್ವಾಚ್ಚ "ಯಥೇಹಕರ್ಮಚಿತೋಲೋಕಃ ಕ್ಷೀಯತೇ ಏವಮೇವಾಮುತ್ರಪುಣ್ಯಾಚಿತೋಲೋಕಃ ಕ್ಷೀಯತೇ" ಇತಿಶ್ರುತೇಃ ಬಾಹ್ಯಕರ್ಮಸ್ವೀಕಾರೇ ತತ್ಫಲಸ್ಯಾಪ್ಯನಿತ್ಯತ್ವಾಪತ್ತೇಃ. ದಮಶ್ಚ ಬಾಹ್ಯೇಂದ್ರಿಯ ನಿಗ್ರಹರೂಪಃ | ಪ್ರತಿಷ್ಠಾ ವಿದ್ಯಾವಿರ್ಭಾವಹೇತುರಿತ್ಯರ್ಥಃ. ಶಿವಾರ್ಚಾದಿಕರ್ಮಸದ್ಭಾವೇ ಸಾಪ್ರತಿತಿಷ್ಠತಿ ತದಭಾವೇ ಸಾನ ಪ್ರತಿತಿಷ್ಠತೀತಿ ಶಿವಪೂಜಾದಿಕಂ ವಿದ್ಯಾವಿರ್ಭಾವಹೇತುರ್ಭವತಿ ದಮಸ್ಯಾಪಿ ವಿದ್ಯಾಪ್ರಯೋಜಕತ್ವಾತ್ ವಿದ್ಯಾಸಾಧನಘಟಕತ್ವಮುಕ್ತಮಿತಿ ಜ್ಞೇಯಂ ಉಕ್ತಂಚ ಸಿದ್ಧಾಂತಶಿಖಾಮಣೌ ರೇಣುಕಭಗವತ್ಪಾದೈಃ | ತಮೋ

---

ಅಥವಾ ಮುಖ್ಯ ಫಲಪರ್ಯವಸಾಯಿಯಾದ ವಿದ್ಯೆಗೇ ಆಗಲೀ ಉಪಯುಕ್ತಗಳಾಗುವದಿಲ್ಲವು ಅನಿತ್ಯ ಸ್ವರ್ಗಾದಿ ಸುಖಕ್ಕೇನೆ ಕಾರಣಗಳಾಗುವವು. ಸ್ವರ್ಗಾದಿ ಅನಿತ್ಯ ಫಲವನ್ನು ಅಪೇಕ್ಷಿಸದಿರುವ ಕೇವಲ ಮುಮುಕ್ಷುಗಳಾದ ವೀರಶೈವರಿಗೆ ಬಾಹ್ಯ ಯಾಗಾದಿ ಕರ್ಮಗಳು ಅನುಷ್ಠೇಯಗಳಲ್ಲವು. ಹಾಗಾದರೆ ಆ ವೈದಿಕ ಕರ್ಮಗಳನ್ನೂ, ಅವುಗಳನ್ನೂ ಪ್ರತಿಪಾದಿಸುವ ವೇದಗಳ ಪೂರ್ವಭಾಗವನ್ನು ವೀರಶೈವನು ಬಿಟ್ಟರೆ ಬೌದ್ಧಾದಿಗಳಂತೆ ಅವೈದಿಕನಾಗಬಹುದಲ್ಲವೇ ? ಅಂದರೆ ವೀರಶೈವನಿಗೆ ಪೂರ್ವಕಾಂಡೀಯ ಕರ್ಮಗಳಿಂದ ಪ್ರಯೋಜನವಿಲ್ಲವು ಅಂಥ ಅನಿತ್ಯಫಲಾಪೇಕ್ಷೆಯುಳ್ಳವನೇ ಅವುಗಳನ್ನು ಆಚರಿಸುವನು. ಸರ್ವೋತ್ತಮಾಧಿಕಾರಿಯಾದ ವೀರಶೈವನು ಕೇವಲ ಜ್ಞಾನಕಾಂಡದಲ್ಲಿ ಹೇಳಿದ ಕರ್ಮಗಳನ್ನು ಮಾತ್ರ ಆಚರಿಸುವದರಿಂದ. ಇವನು ನಿಂದ್ಯನಾಗುವದಿಲ್ಲವು. ಪೂರ್ವಕಾಂಡದಲ್ಲಿ ಹೇಳಿರುವ ಕರ್ಮಗಳನ್ನು ಆಚರಿಸುವವನಿಗೆ ನಿತ್ಯವಾದ ಮೋಕ್ಷಫಲವು ಲಭಿಸುವದಿಲ್ಲವೆಂತಲೂ ಆ ಪೂರ್ವಕಾಂಡದಲ್ಲಿರುವ ಕರ್ಮಗಳು ನಮಗೆ ಸಮ್ಮತಗಳಲ್ಲವೆಂತಲೂ ನಾವು ಹೇಳುವದಿಲ್ಲವು. ಆದರೆ ಬಾಹ್ಯಕರ್ಮಗಳು ಉತ್ತಮಾಧಿಕಾರಿಯಾದ ಲಿಂಗಾಂಗಿಗೆ ಮಾತ್ರ ಯೋಗ್ಯವಲ್ಲವು. ಯಾಕಂದರೆ "ವೀರಶೈವಕುಲೇಜನ್ಮ ಪರಮಂ ದುರ್ಲಭಂ ಸ್ಮೃತಂ" ಎಂಬಂತೆ ಪೂರ್ವಜನ್ಮದಲ್ಲಿ ಪಶುಕರ್ಮಗಳನ್ನಾಚರಿಸಿ ಅದರಿಂದುಂಟಾದ ಪುಣ್ಯಪ್ರಭಾವದಿಂದಲೇ ವೀರಶೈವನಾಗಿ ಹುಟ್ಟುವನು. ಅರ್ಥಾತ್ ಶಿವಭಕ್ತಿ ಹುಟ್ಟುವದಕ್ಕಾಗಿಯೇ ಬಾಹ್ಯಕರ್ಮಗಳು ಅವಶ್ಯಕವು. ಶಿವಭಕ್ತಿಯುಹುಟ್ಟಿದಮೇಲೆ ಅವುಗಳಿಗೇನೊಂದೂ ಪ್ರಯೋಜನವಿಲ್ಲವು. ಆದಕಾರಣ ವೀರಶೈವನು ಕೇವಲ ಬ್ರಹ್ಮಕಾಂಡದ ಕರ್ಮಗಳನ್ನಾಚರಿಸುವನು. ಇದರಿಂದ ಲಿಂಗಾಂಗಿ ಬ್ರಾಹ್ಮಣನು ವೇದವನ್ನು ಮಾನಿಸುವವನಲ್ಲವೆಂಬ ಆಕ್ಷೇಪ ಉಂಟಾಗುವುದು ವೇದವೆಂಬ ಅಂಗಡಿಯಲ್ಲಿ ಅನೇಕಪರದ ರತ್ನಗಳು

ದಮೋ ವಿವೇಕಶ್ಚ ವೈರಾಗ್ಯಂ ಪೂರ್ಣಭಾವನಾ | ಕ್ಷಾಂತಿಃ ಕಾರುಣ್ಯಸಂಪತ್ತಿಃ ಶ್ರದ್ಧಾ ಸತ್ಯಸಮುದ್ಭವಾ || ಶಿವಭಕ್ತಿಃ ಪರೋಧರ್ಮಃ ಶಿವಜ್ಞಾನಸ್ಯಬಾಂಧವಾಃ | ಇತಿ, ಕಿಂಚ ವೇದಾಃ ಸರ್ವಾಂಗಾನಿ ಷಡಂಗಸಹಿತಾಶ್ಚ ವೇದಭಾಗಾ ವೀರಶೈವಾಚಾರ್ಯೋದ್ಧೃತ ಶಾಶ್ವತಫಲಪ್ರಯೋಜಕೀಭೂತಾಃ ಸತ್ಯಂಚವಚನಂ. ಆಯತನಂ ಪ್ರಯೋಜಕಮಿತ್ಯರ್ಥಃ ||೩೩||೮||

ಮೂ|| ಯೋವಾ ಏತಾಮೇವಂ ವೇದಾಪಹತ್ಯ ಪಾಪ್ಮಾನಮನಂತೇ ಸ್ವರ್ಗೇಲೋಕೇ ಜ್ಯೇಯೇ ಪ್ರತಿತಿಷ್ಠತಿ ಪ್ರತಿತಿಷ್ಠತಿ || ಇತಿ ಚತುರ್ಥಃ ಖಂಡಃ

ಕೇನೋಪನಿಷತ್ಸಮಾಪ್ತಾ.

ಶಾಂ|| ಯೋವೇತಿ,, ಯಃ ಏತಾಂ ಬ್ರಹ್ಮವಿದ್ಯಾಮುಕ್ತಸಾಧನಸಂಪನ್ನಃ ವೇದಸಪಾಪ್ಮಾನಂ ಪಾಪಾದಿಜನಕ ಕಾರ್ಮಿಕಾದಿಮಲಮುಪಹತ್ಯ, ವಿಧೂಯ, ಅನಂತೆ ಪರಶಿವಸ್ಯ ಬ್ರಹ್ಮಣಃ ಕಾಲಾದಿ ಪರಿಚ್ಛೇದರಹಿತತ್ವಾತ್. ಸರ್ವಾತ್ಮಕತ್ವಾತ್ ಬ್ರಹ್ಮವಿಷ್ಣ್ವಜ್ಞಾತಾದ್ಯಂತವತ್ವಾದ್ವಾ | ಅನಂತಃ ಪರಶಿವಃ |

---

ಬೆಲೆಗೆ ಸಿದ್ಧಗಳಾಗಿರಲು, ಹೆಚ್ಚಾದ ಬೆಲೆಯನ್ನು ಕೊಟ್ಟು ಅಲ್ಪವಾದ ಗಾಜಿನ ಹರಳುಗಳನ್ನು ತೆಗೆದುಕೊಳ್ಳುವದು ಜಾಣತನವೇನು? ಅಲ್ಪ ಮೂಲ್ಯದಿಂದ ಉತ್ತಮಗಳಾದ ಸತ್ಯಗಳಾದ ರತ್ನಗಳನ್ನು ಗ್ರಹಿಸುವದೇ ಉತ್ತಮವು. ವೀರಶೈವನು ಅಲ್ಪವಾದ ಕ್ರಿಯೆಗಳಿಂದ ಶಾಶ್ವತವಾದ ಮೋಕ್ಷಸುಖವನ್ನು ಪಡೆಯುಕೊಳ್ಳುವನಾದುದರಿಂದ ಇವನೇ ಉತ್ತಮಾಧಿಕಾರಿಯೆಂದೆನಿಸುವನು. ಇವನಿಗೋಸ್ಕರ ವೇದಪುರುಷನೆಂಬ ವ್ಯಾಪಾರಿಯು ಉತ್ತಮ ರತ್ನಗಳಂತಿರುವ ಶಿವಪೂಜಾದಿ ಕರ್ಮಗಳನ್ನು ವಿಧಿಸಿರುವನು. ಆದುದರಿಂದ ಮೋಕ್ಷಸ್ವರೂಪವಾದ ಬ್ರಹ್ಮವಿದ್ಯೆಗೆ ಶಿವಪೂಜಾದಿ ಕರ್ಮಗಳೇ ಸಾಧಕಗಳು. ಆದರೆ ದಮವೆಂಬ ಗುಣವೂ ಮೋಕ್ಷಕ್ಕೆ ಪ್ರಯೋಜನಕಾರಿಯಾಗಿರುವದರಿಂದ ಅದನ್ನೂ ಸಾಧನಕೋಟಿಯಲ್ಲಿ ಸೇರಿಸಿ, ಈ ಉಪನಿಷತ್ತು ಹೇಳಿರುವದು. ಶಮ, ದಮ, ಶಾಂತಿ, ತಿತಿಕ್ಷಾ ಮೊದಲಾದ ಗುಣಗಳು ಶಿವಜ್ಞಾನಕ್ಕೆ ಸಾಧನಗಳಾಗಿರುವವೆಂದು ಶ್ರೀರೇಣುಕ ಭಗವತ್ಪಾದರು ಹೇಳಿಯೇ ಇರುವರು. ಇನ್ನೂ ವೀರಶೈವರಿಂದ ಅಂಗೀಕರಿಸಲ್ಪಟ್ಟ ಷಡಂಗಸಹಿತ ವೇದಭಾಗಗಳೂ ಸತ್ಯವಚನವೂ ಕೂಡ ಬ್ರಹ್ಮವಿದ್ಯೆಗೆ ಪ್ರಯೋಜಕಗಳಾಗುವವೆಂದು ಈ ಉಪನಿಷನ್ಮಂತ್ರದ ತಾತ್ಪರ್ಯವು. ||೩೩||೮||

ಬ್ರಹ್ಮವಿದ್ಯೆಯು ಶಿವಪೂಜಾದಿ ಸಾಧನಗಳಿಂದಾವಿರ್ಭವಿಸುವದೆಂದು ತಿಳಿದು ಯಾವನು ಶಿವಪೂಜಾದಿ ಕರ್ಮಗಳನ್ನಾಚರಿಸುವನೋ ಅವನು ಪಾಪಾದಿಗಳಿಗೆ ಕಾರಣವಾದ ಕಾರ್ಮಿಕಾದಿಮಲತ್ರಯದಿಂದ ಬಿಡಲ್ಪಟ್ಟು ಕಾಲಾದಿ ಪರಿಚ್ಛೇದಗಳಿಲ್ಲದುದಾಗಿಯೂ, ಸರ್ವಾತ್ಮಕನ್ನಸ್ವರೂಪವಾಗಿಯೂ, ಬ್ರಹ್ಮ ವಿಷ್ಣ್ವಾದಿ ದೇವತೆಗಳಿಗೆ ಅಗೋಚರವಾಗಿಯೂ ಇರುವ

ಬ್ರಹ್ಮಾ ಹರಿಶ್ಚ ಭಗವಾನಾದ್ಯಂತಂನೋಪಲಬ್ಧವಾನ್ | ತತೋಽನ್ಯೇಚಸುರಾಯ ಸ್ಮಾದನಂತೋಹಮುತೋಽಸ್ಮ್ಯಹಂ || ಇತಿ ಶಿವಗೀತೋಕ್ತೇಃ. ತಸ್ಮಿನ್ನನಂತೆ ಪರಶಿವೆ ಜ್ಯೇಯೇ ಜ್ಯೇಷ್ಠೆ ಸರ್ವೋತ್ತಮೆ ಸ್ವರ್ಗೇಲೋಕೇ ಸುಖಾತ್ಮಕ ಶಿವ ಲೋಕೇ ಅನಂತಾದಿಪದಸಮಭಿವ್ಯಾಹೃತಸ್ವರ್ಗಲೋಕಶಬ್ದಸ್ಯ ಪರಶಿವಲೋಕಪರಕತ್ವೌಚಿತ್ಯಾತ್ | ಪ್ರತಿತಿಷ್ಠತಿ ಪ್ರತಿಷ್ಠಿತೋಭವತಿ. ಪರಶಿವಲಿಂಗೆ ಸಾಮರಸ್ಯಂಪ್ರಾಪ್ನೋತೀತಿಯಾವತ್, ಪ್ರತಿತಿಷ್ಠತೀತಿ ಪುನರ್ವಚನಂ. ಉಪನಿಷತ್ಸಮಾಪ್ತಿಪ್ರದರ್ಶನಾರ್ಥಂ || ಇತಿ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀಮಜ್ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯಾಸ್ಥಾನಪಂಡಿತೇನ ಉಮಚಿಗಿಪುರಮಧ್ಯವಿದ್ಯೋತಮಾನ ವೃಷ್ಟಿ ಮಠಾಧೀಶ್ವರೇಣ ಧರ್ಮರತ್ನ ಪ್ರಶಸ್ತಿಸಮಲಂಕೃತೇನ ಶಂಕರಶಾಸ್ತ್ರಿಣಾ ರಚಿತಾ ಕೇನೋಪನಿಷದಶ್ಚತುರ್ಥಖಂಡಸ್ಯ ಶಾಂಕರೀವ್ಯಾಖ್ಯಾ ಸಮಾಪ್ತಾ.

ಸರ್ವಾಭೀಷ್ಟಫಲಪ್ರದೆ ಶಿವಪದೆ ಕಲ್ಯಾಣಬೃಂದಾಸ್ಪದೆ<br>
ಭಕ್ತಾನಾಂ ಸುಖದೆ ಲಸದ್ಗುರುಪದೆ ಸುಜ್ಞಾನ ಪಾಥೋಪ್ರದೆ ||<br>
ವ್ಯಾಖ್ಯೇಯಂನಿಹಿತಾ್ವಭವಚ್ಛರಪದೆ ರತ್ನಾವಲೀ ಶಾಂಕರೀ<br>
ಹ್ಯಯ್ಯಪ್ಪಾರ್ಯತನೂಜ ಶಂಕರ ಸುಧೀರತ್ನೇನ ವಿದ್ವನ್ಮುದೆ ||೧||



ಸರ್ವೋತ್ತಮವಾದ ನಿತ್ಯಾನಂದ ಸ್ವರೂಪವಾದ ಪರಶಿವನಲ್ಲಿ ನೆಲೆಗೊಳ್ಳುವನು. (ಸಾಮರಸ್ಯ ಮುಕ್ತಿಯನ್ನೈದುವನು) ಈ ಮಂತ್ರದಲ್ಲಿ "ಪ್ರತಿತಿಷ್ಠತಿ ಪ್ರತಿತಿಷ್ಠತಿ" ಎಂದು ಎರಡುಸಾರಿ ಹೇಳಿರುವದು ಉಪನಿಷತ್ಸಮಾಪ್ತಿಯನ್ನು ತೋರಿಸುವದಕ್ಕೆಂದು ತಿಳಿಯತಕ್ಕದು.

ಇಲ್ಲಿಗೆ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀಮಜ್ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯಾಸ್ಥಾನಪಂಡಿತ ಧಾರವಾಡಜಿಲ್ಲಾ ಹುಬ್ಬಳ್ಳೀ ತಾಲೂಕ ಉಮಚಿಗಿ ಮಠಾಧ್ಯಕ್ಷ ಧರ್ಮರತ್ನಪ್ರಶಸ್ತೀದರ ವೇದಮೂರ್ತಿ ಶಂಕರಶಾಸ್ತ್ರಿಗಳಿಂದ ರಚಿತವಾದ ಶಾಂಕರೀ ಎಂಬ ಹೆಸರುಳ್ಳ ಕೇನೋಪನಿಷತ್ತಿನ ವ್ಯಾಖ್ಯಾನಕ್ಕೆ ಶಿವಾದ್ವೈತ ವಿದ್ಯಾವಿಭೂಷಣ ಎಂಬ ಪ್ರಶಸ್ತಿಯಂ ಪಡೆದ ಸಿರಸಿ ಗುರುಶಾಂತಶಾಸ್ತ್ರಿಗಳಿಂದ ಕನ್ನಡದಲ್ಲಿ ರಚಿತವಾದ ಭಾವದರ್ಪಣವೆಂಬ ಕನ್ನಡ ಟೀಕೆಯು ಸಮಾಪ್ತವಾದುದು.

ಕಂ|| ಕೇನೋಪನಿಷದ್ವ್ಯಾ | ಖ್ಯಾನಕೆ ವರಸಿರಸಿಮಠದ ಗುರುಶಾಂತ ಬುಧಂ ||<br>
ತಾನೆ ವಿರಚಿಸಿದ ಕನ್ನಡ | ದಾಸುಡಿಯುರುಟೀಕೆ ಮುಗಿದುದೀಶ್ವರಕೃಪೆಯಿಂ||<br>
ಶುಭಂ—ಭೂಯಾತ್<br>
ಶಾಲಿವಾಹನಶಕ ೧೮೮೫ ವೈಶಾಖ ಶು||



Dharmaratna Padavidharaha

**Pandita Sankara Sastri, Umachigi.**

ಧರ್ಮರತ್ನ ಪದವೀಧರಃ

**ಪಂ. ಶಂಕರಶಾಸ್ತ್ರೀ, ಉಮಚಿಗಿ.**

೧. ಈಶಾವಾಸ್ಯೋಪನಿಷಚ್ಛಾಂಕರೀ

೨. ಕೇನೋಪನಿಷಚ್ಛಾಂಕರೀ

೩. ವೀರಶೈವ ಸಿದ್ಧಾಂತಸುಧಾಕರ

ಈ ಮೂರು ಗ್ರಂಥಗಳು ಸಿಕ್ಕುವ ಸ್ಥಳ.

ಹರಿಹರದಲ್ಲಿರುವ ಹೊಸ ಮಠದ ವೇ|| ಚನ್ನಯ್ಯನವರು.

ತಾ|| ಹರಿಹರ,

ಚಿತ್ರದುರ್ಗ ಡಿಸ್ಟ್ರಿಕ್ಟ್.

ಮೆಸ್ಸರ್ಸ್ ಎಂ. ಎಸ್. ಸಿದ್ದಪ್ಪ ಅಂಡ್ ಬ್ರದರ್ಸ್,

ಹಾರ್ಮೋನಿಯಂ ವ್ಯಾಪಾರಿಗಳು, ಮೈಸೂರು.